# ವನಿತಾ

ತಿಂಗಳ ಪತ್ರಿಕೆ   ಅಕ್ಟೋಬರ್ 1993

★ ಲೇಖಕಿಯ ವೇದನೆಗಳು

★ ಅಧಿಕಾರ ವಿಕೇಂದ್ರೀಕರಣ : ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರ

★ 'ಸ್ತ್ರೀ ಪುರುಷ' ಸ್ತ್ರೀ ಸಂಚಯ

★ ಅಸಭ್ಯ ಪತ್ರಿಕೋದ್ಯಮದ ವಿರುದ್ಧ ಸಿ.ಎಫ್.ಟಿ.ಆರ್.ಐ.ನ ಮಹಿಳೆಯರ ಹೋರಾಟ

★ ಗ್ರಾಮೀಣ ಶಾಲೆಗಳಲ್ಲಿ ಇಳಿಮುಖವಾಗುತ್ತಿರುವ ಹೆಣ್ಣು ಮಕ್ಕಳ ಸಂಖ್ಯೆ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೮ ಸಂಚಿಕೆ : ೯

ಅಕ್ಟೋಬರ್- ೧೯೯೩

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ಎ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು-560 067

**ಸಂಪರ್ಕ ವಿಳಾಸ**

ನಂ-457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086

ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.


## ಈ ಸಂಚಿಕೆಯಲ್ಲಿ...




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦ ೦೬೭



# ಸಂಪಾದಕೀಯ

ಕುಡಿತದ ವಿರುದ್ಧ, ಮದ್ಯಪಾನದಂಗಡಿಗಳಿಗೆ ಬೀಗಮುದ್ರೆ ಹಾಕಿಸುವುದು, ಪರವಾನಗಿಯನ್ನು ರದ್ದು ಪಡಿಸುವುದಕ್ಕಾಗಿ ರಾಜ್ಯಾದ್ಯಂತ ಅಲ್ಲಲ್ಲಿ ಬಿಡಿ, ಬಿಡಿಯಾಗಿ ಮಹಿಳೆಯರು ದನಿ ಎತ್ತುತ್ತಿರುವುದನ್ನು ನಾವು ಕಾಣಬಹುದು. ಇಂದು ಪಟ್ಟಣಗಳಲ್ಲಿ ಕುಡಿಯುವುದು ಸರ್ವೇಸಾಮಾನ್ಯವೆಂಬಂತಹ ಧೋರಣೆಯ ಜೊತೆಗೆ ಹಳ್ಳಿಗಳಲ್ಲಿ ಹಾಲಿನ ವಾಹನಗಳಂತೆ ಸಾರಾಯಿ ವಾಹನಗಳು ಕಂಡುಬರುತ್ತಿರುವುದು ಖೇದದ ಸಂಗತಿ.

ಕುಡಿತ ಪುರುಷನ ಮಾನಸಿಕ ಹಾಗೂ ದೈಹಿಕ ಆರೋಗ್ಯವನ್ನು ಹಾಳು ಮಾಡುವುದರೊಂದಿಗೆ ಕುಟುಂಬವನ್ನೇ ಸರ್ವನಾಶ ಮಾಡುತ್ತದೆ. ಕುಡಿದು ಬಂದು ಹೆಂಡತಿಯನ್ನು ಹೊಡೆಯುವುದು, ದುಡಿದು ತಂದದ್ದನ್ನೆಲ್ಲಾ ಕುಡಿತಕ್ಕೆ ಸುರಿಯುವುದರಿಂದ ಮನೆಯ ಸಂಪೂರ್ಣ ಜವಾಬ್ದಾರಿ ಹೆಣ್ಣಿನ ಮೇಲೆ ಬೀಳುತ್ತದೆ. ಅದರಲ್ಲೂ ನಗರದ ಅಸಂಘಟಿತ ಹಾಗೂ ಗ್ರಾಮೀಣ ಮಹಿಳೆಯರ ಸ್ಥಿತಿ ಶೋಚನೀಯವಾದದು.

ಮೊದಲನೆಯದಾಗಿ ಕುಡಿಯುವ ವ್ಯಕ್ತಿಯ ಮನ ಪರಿವರ್ತನೆಯಾಗಬೇಕಾಗುತ್ತದೆ. ಬೀಗಮುದ್ರೆ ಹಾಕಿಸುವುದು, ಪರವಾನಗಿ ರದ್ದು ಪಡಿಸುವುದು ಸ್ವಾಗತಾರ್ಹವಾದರೂ, ಮೂಲಭೂತವಾಗಿ ಹೆಂಡದ ದೊರೆಗಳ ಜಾಲವನ್ನು ಈ ಜಾಲ ರಾಜಕೀಯ ಪಕ್ಷಗಳಿಗೆ ನೀಡುವ ಬೆಂಬಲ, ರಾಜಕೀಯ ಪಕ್ಷಗಳು ಈ ಜಾಲಗಳಿಗೆ ನೀಡುವ ಬೆಂಬಲವನ್ನು ಪ್ರತಿಭಟಿಸುವುದು ಅತ್ಯಗತ್ಯವಾಗಿದೆ. ಮಹಿಳಾ ಸಂಘ ಸಂಸ್ಥೆಗಳು ಬಿಡಿಬಿಡಿಯಾಗಿ ನಡೆಸುವ ಪ್ರಯತ್ನಗಳು ಸ್ವಾಗತಾರ್ಹವಾದರೂ ಈ ಪ್ರಯತ್ನಗಳು ಚಳವಳಿಯ ರೂಪದಲ್ಲಿ ಕಂಡುಬಂದರೆ ಮಾತ್ರ ಈ ಶಕ್ತಿಗಳ ಹಿಂದಿರುವ ಬಲವನ್ನು ಕುಗ್ಗಿಸಬಹುದು.

# ಲೇಖಕಿಯ ವೇದನೆಗಳು

ಮೂಲ ಇಂಗ್ಲೀಷ್ - Woes of a writer by
Amritha Pritham

ಒಬ್ಬ ಮಹಿಳೆಯನ್ನು ಒಬ್ಬ ಕವಿಯತ್ರಿಯಾಗಿ ಸ್ವೀಕರಿಸುವುದಕ್ಕಿಂತ ಸುಲಭವಾಗಿ ಒಬ್ಬ ಹಾದರಗಿತ್ತಿಯಾಗಿ ಸ್ವೀಕರಿಸುತ್ತದೆ ನಮ್ಮ ಸಮಾಜ. ದಾರಿಯ ಕೆಸರು ಬಿಳಿ ಹಾಳೆಯನ್ನು ರಾಡಿಗೊಳಿಸುವಂತೆ ಕಡು ಬಣ್ಣದ ಉಡುಪುಗಳನ್ನು ಹಾಳುಮಾಡುವುದಿಲ್ಲ. ಹೆಣ್ಣೆಂದರೆ ಕೆಸರು ಸ್ಪಷ್ಟವಾಗಿ ರಾಚುವ ಬಿಳಿ ಹಾಳೆಯಂತೆ.

ಒಬ್ಬಾಕೆ ವೇಶ್ಯೆಯ ಬಗ್ಗೆಯೋ ಅಥವಾ ವಿಕೃತ ಕಾಮ ಸಂಬಂಧಗಳ ಬಗ್ಗೆಯೋ ಬರೆದರೆ ಅಥವಾ ಮನುಷ್ಯರ ಮಾನಸಿಕ ತುಡಿತಗಳನ್ನು ವಿಶ್ಲೇಷಿಸಿದರೆ ಓದುಗರು ಅಲ್ಲಿ ನಿರೂಪಿತವಾಗಿರುವ ಕೆಟ್ಟ ಅಂಶಗಳನ್ನು ಆ ಲೇಖಕಿಯ ವೈಯಕ್ತಿಕ ಬದುಕಿಗೆ ಆರೋಪಿಸಿ ನೋಡುತ್ತಾರೆ. ಕೆಟ್ಟ ಕುತೂಹಲವನ್ನು ಪ್ರಕಟಿಸುವ, ಕೆಣಕುವ ಮೂರ್ಖ ಪತ್ರಗಳು ನನಗೆ ಹೆಚ್ಚಾಗಿ ಬರುತ್ತದೆ. ಒಂದು ಪ್ರಣಯ ಕವಿತೆಯನ್ನು ಓದಿದರೆ "ನಿಮ್ಮ ಪ್ರಿಯತಮ ಯಾರು ? ಯಾರಿಗಾಗಿ ಈ ಕವಿತೆಯನ್ನೇ ಬರೆದಿರಿ" ಎಂದು ಜನ ಕೇಳುತ್ತಾರೆ. ಒಬ್ಬ ವಿವಾಹಿತ ಮಹಿಳೆಗೆ ಈ ಪ್ರಶ್ನೆಗಳಿಂದ ಆಗುವ ಗಲಿಬಿಲಿಯನ್ನು ಕಲ್ಪಿಸಿಕೊಳ್ಳಿ. ಧರ್ಮದ ದಿರುಸನ್ನು ಧರಿಸಿಕೊಂಡು, ನೈತಿಕತೆಯ ಮೇಲುಡುಪನ್ನು ಹಾಕಿಕೊಂಡು ನಾವು ಬಾಳುತ್ತೇವೆ. ಅವನೊಬ್ಬ ರಾಜಕೀಯ ಧುರೀಣನಾಗಿರಲಿ, ಅರ್ಚಕನಾಗಿರಲಿ ಅಥವಾ ಬರಹಗಾರನಾಗಿರಲಿ ಅವನ ವೈಯಕ್ತಿಕ ಜೀವನ ಮತ್ತು ಅವನ ವೃತ್ತಿ—ಇವುಗಳ ಜೊತೆ ಸಂಬಂಧ ಕೂಡಲೇ ಸ್ಥಾಪಿತವಾಗುತ್ತದೆ. ಈ ನಮ್ಮ ದೇಶದಲ್ಲಿ ಒಬ್ಬ ಒಳ್ಳೆಯ ಜನರಲ್ ಯಾರು ಎಂದರೆ ನೀಟಾಗಿ ಬಾಳುವೆ ಮಾಡುವವನು ಮತ್ತು ಯಾವುದೇ ಆಮಿಷಗಳಿಂದ ದೂರವಿರುವವನು. ಒಬ್ಬ ಒಳ್ಳೆಯ ಆರ್ಥಿಕ ತಜ್ಞ ಯಾರೆಂದರೆ ಸಿಗರೇಟು, ಮದ್ಯ ಮತ್ತಿತರ ವ್ಯಸನಗಳಿಂದ ದೂರವಿರುವವನು—ಹೀಗೆ ತಿಳಿದರೆ ಆಶ್ಚರ್ಯವಿಲ್ಲ. ಕೇವಲ ಧಾರ್ಮಿಕತೆಗಾಗಿಯೇ ಗೌರವಿಸಲ್ಪಡುವ ಒಬ್ಬ ಗಡ್ಡಧಾರಿ ಡಾಕ್ಟರನ್ನು ನಾನು ಬಲ್ಲೆ. ಅವನು ರೋಗಿಗಳಿಗೆ ತಪ್ಪು ಔಷಧಿಗಳನ್ನು ಸೂಚಿಸಿದ ಕಾರಣದಿಂದ ಅವರು ಸತ್ತರೂ ಸರಿಯೆ. ಇನ್ನು ಒಬ್ಬ ಲೇಖಕ ಅವನ ವೃತ್ತಿಯ ಸಹಜ ಸ್ವಭಾವದಿಂದಾಗಿಯೇ ಪ್ರತಿಷ್ಠೆ ಮತ್ತು ಹುಸಿ ಮೌಲ್ಯಗಳ ಶತ್ರುವಾಗಿರುತ್ತಾನೆ. ಹೀಗಾಗಿ ನಿರ್ಜೀವ ವ್ಯವಸ್ಥೆಯ ವಿರುದ್ಧ ಸದಾ ಬಂಡೇಳುವುದು ಅನಿವಾರ್ಯ.

ಒಬ್ಬ ಪುರುಷನಿಗಿರುವಷ್ಟು ಅನುಭವಗಳ ಅವಕಾಶ ಮಹಿಳೆಗೆ ಇರುವುದಿಲ್ಲ. ಭಾವನೆಗಳ ವಾಸ್ತವತೆಯನ್ನು ಒಬ್ಬ ಪುರುಷ ಬಹಿರ್ಮುಖಿಗೊಳಿಸಿ ನೋಡಿದರೆ ಒಬ್ಬ ಮಹಿಳೆ ಅದನ್ನು ಅಂತರ್ಮುಖಿಗೊಳಿಸಿ ನೋಡುತ್ತಾಳೆ. ಒಳ್ಳೆಯ ಕೆಟ್ಟ, ರೂಕ್ಷ, ಕ್ರೂರ ಆಮಿಷಗಳಿಂದ ಕೂಡಿದ ಸಾಹಸಯುತವಾದ ಮತ್ತು ಆ ನೈಸರ್ಗಿಕವಾದ ಮುಕ್ತ ಜೀವನ ಕೇವಲ ಅವನ ದೈಹಿಕ ಸಾಮರ್ಥ್ಯದಿಂದಾಗಿ ಅವನಿಗೆ ದಕ್ಕುತ್ತದೆ. ಆದರೆ ಹೆಣ್ಣಿಗೆ ಅವಳ ಮನೆಯ ನಾಲ್ಕೂ ಕೋಣೆಗಳ ಮಧ್ಯೆ ಬೆಳೆಯುವುದರಿಂದ ಅವಳು ಇವುಗಳಿಂದ ವಂಚಿತಳಾಗುತ್ತಾಳೆ. ಒಂದು ವೇಳೆ ಅವಳು ಹೊರ ಜಗತ್ತಿಗೆ ಹೋದರು ಕೂಡ ಆಮೆಯಂತೆ ಬೆನ್ನಿನ ಮೇಲೆ ಮನೆಯ ಗೋಡೆಯೆಂಬ ಚಿಪ್ಪುಗಳನ್ನು ಹೊರುತ್ತಾಳೆ.

ಪಾಶ್ಚಾತ್ಯ ಮಹಿಳೆ ಮೂರುಶತಮಾನಗಳಿಂದ ಯಾವ ಸ್ವಾತಂತ್ರ್ಯವನ್ನು ಅನುಭವಿಸಿದ್ದಾಳೋ ಅದು ಈ ದೇಶಕ್ಕೆ ತಿಳಿದೇ ಇಲ್ಲ. ಒಮ್ಮೆ ನಲ್ವತ್ತರ ದಶಕದ ಆರಂಭದಲ್ಲಿ "ಇಂಡಿಯನ್ ಲಿಸನರ್" ಪತ್ರಿಕೆಯ ಮುಖ್ಯ ಪುಟದಲ್ಲಿ ನನ್ನ ಫೋಟೋ ಅಚ್ಚಾಯಿತು. ಒಬ್ಬ ಬೀಡಾ ಬೀಡಿ ಅಂಗಡಿಯವ ಆ ಚಿತ್ರವನ್ನು ತನ್ನ ಅಂಗಡಿಯ ಮರದ ಬೋರ್ಡಿನಲ್ಲಿ ಅಂಟಿಸಿದ. ಪುರೋಹಿತ ವರ್ಗ, ಪ್ರತಿಗಾಮಿ ಪತ್ರಿಕೆಗಳು ಮತ್ತು ಸಂಸ್ಥೆಗಳು ಆ ಚಿತ್ರದ ಪ್ರಕಟಣೆಯ ವಿರುದ್ಧ ಬರೆದರು. ಗಯ್ಯಾಳಿ ಹೆಂಗಸರು ಮತ್ತು ಸಣ್ಣ ಸಣ್ಣ ವ್ಯಾಪಾರಿಗಳ ಹೆಂಡಂದಿರು ಕುಚೋದ್ಯದ ಮಾತುಗಳನ್ನೇ ನನ್ನ ಕುರಿತಾಗಿ ಆಡಿದರು.

ಇತರ ದೇಶಗಳಲ್ಲಿ ಜನರು ತಮ್ಮ ನೆಚ್ಚಿನ ಬರಹಗಾರರ ಮತ್ತು ಕಲಾವಿದರ ಭಾವಚಿತ್ರಗಳನ್ನು ತಮ್ಮ ಮನೆಗಳಲ್ಲಿ ತೂಗುತ್ತಾರೆ. ಫ್ರಾನ್ಸದೇಶದಲ್ಲಿ ಒಬ್ಬ ಪರಿಚಾರಿಕೆಗೆ ಕೂಡ ಪಿಕಾಸೊ ಎಂದರೆ ಗೊತ್ತು. ಜೀನ್‌ಪಾಲ್ ಸಾರ್ತ್ರೆ

ಎಂದರೆ ಗೊತ್ತು. ಅವಳಿಗೆ ಆ ಪ್ರದೇಶದ ಜನ ಪ್ರತಿನಿಧಿಯೋ ಸಚಿವನೋ ಗೊತ್ತಿರಲಾರದು. ಆದರೆ ನಮ್ಮ ದೇಶದಲ್ಲಿ, ಅದರಲ್ಲೂ ಪಂಜಾಬಿನಲ್ಲಿ ಹೊಸ ವ್ಯಾಪಾರಿ ವರ್ಗಕ್ಕೆ ಪ್ರತಿಯೊಬ್ಬ ಉಪಸಚಿವನೂ ಗೊತ್ತು. ಆದರೆ ಅಮೃತ್ ಶೇರಗಿಲ್ ಅಥವಾ ಮೋಹನ ಸಿಂಗ್ ಎಂದರೆ ಯಾರೆಂದು ಗೊತ್ತಿಲ್ಲ.

ಪಂಜಾಬಿಗಳಿಗೆ ಜೀವನೋತ್ಸಾಹವಿರುತ್ತದೆ. ಅವರಿಗೆ ಬಣ್ಣ, ಒಳ್ಳೆಯ ಆಹಾರ ಹಾಗೇ ಒಳ್ಳೆಯ ಜನಗಳೆಂದರೆ ತುಂಬ ಇಷ್ಟ. ಒಂದು ರೀತಿಯ ಆಡಂಬರತೆ ಅವರಲ್ಲಿ ಹುದುಗಿರುತ್ತದೆ. ಹೋಟೆಲು, ಕೆಫೆ, ನೈಟ್ ಕ್ಲಬ್ಬುಗಳು ಪಂಜಾಬಿಗಳಿಂದ ತುಂಬಿರುತ್ತದೆ. ಈಗ ಪಂಜಾಬು ಪ್ರತ್ಯೇಕ ರಾಷ್ಟ್ರವಾಗಬೇಕೆಂದು ಹೋರಾಡುತ್ತಾರಲ್ಲ ಅವರಿಗೆ ಪಂಜಾಬಿ ಸಂಸ್ಕೃತಿ ಮತ್ತು ಕಲೆಯ ಬಗ್ಗೆ ಆದರವಾಗಲೀ ಅರಿವಾಗಲೀ ಇಲ್ಲ. ಖಂಡಿತವಾಗಿ ಅವರಿಗೆ ಅವರ ನೆಲದ ಬರಹಗಾರರಾಗಲೀ ಚಿತ್ರಕಾರರಾಗಲೀ ಗೊತ್ತಿಲ್ಲ. ಅವರು ಒಬ್ಬ ಕವಿಯನ್ನು ಬಹಳ ವಿಜೃಂಭಣೆಯಿಂದ ಸನ್ಮಾನಿಸುವುದಕ್ಕಾಗಿ 5,000 ರೂ ವೆಚ್ಚ ಮಾಡಲು ಸಿದ್ಧರಾಗಿರುವರು. ಆದರೆ ಕನಿಷ್ಠ ಮೂರು ರೂಪಾಯಿಯನ್ನು ಒಂದು ಕಾವ್ಯ ಸಂಗ್ರಹಕ್ಕಾಗಲೀ ಅಥವಾ ಸಣ್ಣಕತೆಗಳ ಸಂಕಲನಕ್ಕಾಗಲೀ ವಿನಿಯೋಗಿಸಲು ಖಂಡಿತ ಒಪ್ಪುವರಲ್ಲ. ಪಂಜಾಬಿ ಸಂಸ್ಕೃತಿಯ ಒಂದು ಪ್ರಮುಖ ಕೇಂದ್ರವಾದ ಹೊಸ ದಿಲ್ಲಿಯಲ್ಲಿ ಸತ್ಕಾರ ಕೂಟಗಳಲ್ಲಿ ಆಗಾಗ ನನ್ನನ್ನು ಸನ್ಮಾನಿಸುತ್ತಾರೆ. ಅಂತಹ ಒಂದು ಸಮಾರಂಭಕ್ಕೆ ಎರಡು ಸಾವಿರಕ್ಕಿಂತ ಹೆಚ್ಚು ಖರ್ಚಾಯಿತು. ಅದರ ಅರ್ಧದಷ್ಟು ಹಣವನ್ನು ಹಾಗೇ ಕೊಟ್ಟಿದ್ದರೆ ! ನನ್ನ ಮನೆಯನ್ನು ನವೀಕರಿಸಬಹುದಿತ್ತು. ನನ್ನ ಅಡುಗೆ ಕೋಣೆಯನ್ನು ಚೆನ್ನಾಗಿ ಇಡಬಹುದಿತ್ತು. ಅಥವಾ ಪುಸ್ತಕಗಳನ್ನೋ ಇನ್ನಿತರ ಅಗತ್ಯಗಳನ್ನೋ ಪೂರೈಸಬಹುದಾಗಿತ್ತು ಎಂದು ನಾನೆಷ್ಟು ಆಸೆಪಟ್ಟೆ ! ಇಂತಹ ಕಾರ್ಯಕ್ರಮಗಳ ಸಂಘಟಕರ ಮನೆಗೆ ಕೆಲವೊಮ್ಮೆ ನಾನು ಹೋದದ್ದಿದೆ. ಆದರೆ ನನ್ನ ಯಾವುದೇ ಕೃತಿ ಅವರ ಮನೆಯಲ್ಲಿದ್ದುದನ್ನು ನಾನು ಕಂಡಿಲ್ಲ. ಹೆಚ್ಚಾಗಿ ಹುಲಿಯ ಚರ್ಮ ಗೋಡೆಯ ಮೇಲೆ ಶೋಭಿಸಿದ್ದೀತು ವಿನಾ ಪುಸ್ತಕಗಳ ಕವಾಟು ಹುಡುಕಿದರು ಇಲ್ಲ.

ಒಬ್ಬ ಮಹಿಳೆಗೆ ಆಕೆಯ ಕೃತಿ ಒಂದು ಮ್ಯಾಗಸಿನನಲ್ಲಿ ಪ್ರಕಟವಾಗುವುದು ಒಬ್ಬ ಪುರುಷನಿಗಿಂತ ತುಲನಾತ್ಮಕವಾಗಿ ಸುಲಭ. ಕೆಲವು ಪುರುಷರು ಸ್ತ್ರೀಕಾವ್ಯನಾಮಗಳನ್ನಿಟ್ಟು ಬರೆಯುವುದನ್ನು ನಾನು ಬಲ್ಲೆ, ಆದರೆ ಒಂದು ನಿಜವಾಗಿಯೂ ಉತ್ಕೃಷ್ಟ ಕವನ ಅಥವಾ ಸಣ್ಣಕಥೆ, ಒಬ್ಬ ಮಹಿಳೆಯ ಹೆಸರಲ್ಲಿ ಪ್ರಕಟವಾದರೆ ಪ್ರತಿಯೊಬ್ಬನೂ ಸಂಶಯಗ್ರಸ್ತನಾಗುತ್ತಾನೆ. ನನ್ನ ಮೊದಲ ಕವನಗಳು 1936ರಲ್ಲಿ ಪಂಜಾಬಿ ಪತ್ರಿಕೆಗಳಲ್ಲಿ ಪ್ರಕಟವಾದವು. ಆದರೆ ಅದರ ಸಂಪಾದಕರು ಮತ್ತು ಓದುಗರು ಆ ಕವನಗಳನ್ನು ನಾನು ಬರೆದದ್ದಲ್ಲವೆಂದೂ ಅವು ಸ್ವತಃ ಕವಿಯಾದ ನನ್ನ ತಂದೆಯ ರಚನೆಗಳೆಂದೂ ಭಾವಿಸಿದ್ದರು. ಇದು ಒಂದು ರೀತಿಯಲ್ಲಿ ಖುಷಿಯನ್ನು ಕೊಟ್ಟಿತ್ತು. ಯಾಕೆಂದರೆ ನನ್ನ ಕೃತಿ ಎಷ್ಟು ಒಳ್ಳೆಯದಿತ್ತೆಂದರೆ ಅದನ್ನು ನನ್ನ ತಂದೆ ಬರೆದದ್ದೆಂದು ಭಾವಿಸುವಷ್ಟು ! ಆದರೆ ಅದು ನನ್ನನ್ನು ಆಳವಾಗಿ ಘಾಸಿಗೊಳಿಸಿತ್ತು ಕೂಡ. ಯಾಕೆಂದರೆ ಅಂತಹ ಕವನದ ರಚನೆಗೆ ನಾನು ಅರ್ಹಳಲ್ಲವೆಂದು ಭಾವಿಸಲಾಗಿತ್ತು. ನನ್ನ ತಂದೆಯವರು 1946ರಲ್ಲಿ ತೀರಿಹೋದರು. ಮತ್ತೆ ಒಂದು ವರ್ಷದ ಬಳಿಕವಷ್ಟೇ ನನ್ನ ಕವನ ನನ್ನದೇ ಎಂದು ಎಲ್ಲರೂ ನಂಬುವಂತಾಯಿತು. ನನಗೆ ನೆನಪಿದೆ. ದೇಶ ವಿಭಜನೆ ಆ ಕವನದ ವಿಷಯವಾಗಿತ್ತು ಮತ್ತು "ವಾರ್‌ನಿಷಾನೊಂದಿಗೆ ನನ್ನ ಮಾತು" ಎಂದು ಅದರ ಶೀರ್ಷಿಕೆಯಾಗಿತ್ತು. ಒಬ್ಬ ಮಹಿಳೆ ಅವಳ ಕಲೆಯನ್ನು ಸಂಶಯಗ್ರಸ್ತ ಜನಗಳು ಒಪ್ಪುವಂತೆ ಮಾಡಲು ಬಹಳ ಕಷ್ಟಪಡಬೇಕಾಗುತ್ತದೆ. ಇಸ್ಮತ್ ಚುಗ್ತೈ ಎಂಬ ಪ್ರಸಿದ್ಧ ಉರ್ದು ಬರಹಗಾರ್ತಿ ಲೈಂಗಿಕ ಸಂಬಂಧಗಳು ಮತ್ತು ಸ್ತ್ರೀ ಶೋಷಣೆ ವಸ್ತುವಾಗುಳ್ಳ ಕತೆಗಳನ್ನು ಮೊದಲಿಗೆ ಬರೆದಾಗ ಅವಳ ಶೈಲಿ ಮತ್ತು ಮನುಷ್ಯ ಪ್ರೇರಣೆಗಳನ್ನು ಆಳಕ್ಕಿಳಿದು ಶೋಧಿಸುವ ಪ್ರವೃತ್ತಿ ಓದುಗರನ್ನು ಆಘಾತಗೊಳಿಸಿತು. ಕೆಲ ಸಮುಯುದವರೆಗೆ ಅವಳ ಕಲೆಯನ್ನು 'ಪುರುಷ ಪ್ರತಿಭೆ' ಎಂದು ಬಣ್ಣಿಸಿತು.

ನನ್ನ ಈ ಬರವಣಿಗೆ ವೃತ್ತಿಯ ಆರಂಭದ ವರ್ಷಗಳಲ್ಲಿ ನಾನು ಇತರರ ಕವನಗಳನ್ನು ಕದಿಯುತ್ತೇನೆಂದು ಆರೋಪ ಹೊರಿಸಲಾಯಿತು. ಮಾತ್ರವಲ್ಲ ನನ್ನ ಕವನಗಳನ್ನು ನಾನು ರೂಪವತಿಯಾಗಿದ್ದುದರಿಂದ ಸಂಪಾದಕರು ಪ್ರಕಟಿಸುತ್ತಾರೆಂದೂ ವ್ಯಂಗ್ಯವಾಡುತ್ತಿದ್ದರು (ಸಾಂಪ್ರದಾಯಿಕವಾದ ನಂಬಿಕೆ ಏನೆಂದರೆ, ಒಬ್ಬ ಕವಿಯೆಂದರೆ, ಆತ

ಒಬ್ಬ ನೊಂದ ಬೆಂದ ಕುರೂಪಿ ಪ್ರಾಣಿ ಎಂದು) ಇದು ನನ್ನ ಬರವಣಿಗೆಯನ್ನು ಮುದುಡಿಸಿತು. ಯಾಕೆಂದರೆ ನನ್ನ ಕಾವ್ಯದ ಯಶಸ್ಸನ್ನು ನನ್ನ ಸೌಂದರ್ಯಕ್ಕೆ ಆರೋಪಿಸುವ ಈರೀತಿಯ ಪ್ರತಿಕ್ರಿಯೆಗಳಿಂದ ನಾನು ಆಗಾಗ ನೊಂದುಕೊಳ್ಳುತ್ತಿದ್ದೆ. ನಾನು ಒಂದೊಮ್ಮೆ ಬಹಳ ಉತ್ಸಾಹದಿಂದ ಸಭೆ ಸಮಾರಂಭಗಳಲ್ಲಿ, ಕವಿ ಸಮ್ಮೇಳನಗಳಲ್ಲಿ ಭಾಗವಹಿಸುತ್ತಿದ್ದೆ. ಸ್ವಲ್ಪ ಕಾಲ ಕಳೆದ ಮೇಲೆ ನಾನು ಈ ಪರಿಪಾಠವನ್ನು ನಿಲ್ಲಿಸಿದೆ. ತಣ್ಣಗಿನ ಮುದ್ರಣ ಮಾಧ್ಯಮವೇ ಜನರನ್ನು ತಲುಪುವ ಉತ್ತಮ ಮಾರ್ಗವೆಂದು ನಾನು ಭಾವಿಸಿದೆ.

ಕೆಲವು ವರ್ಷಗಳ ಹಿಂದೆ ಇಂಗ್ಲಿಷಿನ ಒಂದು ಪ್ರಸಿದ್ಧ ಪತ್ರಿಕೆ ನನ್ನ ಕುರಿತಾಗಿ ಹೀಗೆಂದು ಬರೆಯಿತು—"ಅವಳ ಯೌವ್ವನ ಮತ್ತು ಸೌಂದರ್ಯ ಅವಳಿಗೆ ಪ್ರಸಿದ್ಧಿಯನ್ನು ತಂದುಕೊಟ್ಟವು." ಅಮೃತಾ ಶೇರ್‌ಗಿಲ್‌ಳ ಚಿತ್ರಕಲೆಯ ಬಗ್ಗೆ ಮಾತನಾಡುವುದನ್ನು ಕೇಳಿ ಆ ಕಲಾವಿದೆ ತನಗಾನ ವೇದನೆಯನ್ನು ಅವಳ ಸ್ನೇಹಿತೆಯರೊಂದಿಗೆ ಹಂಚಿಕೊಂಡದ್ದನ್ನು ಈಗ ನಾನು ಅರ್ಥ ಮಾಡಿಕೊಳ್ಳಬಲ್ಲೆ.

ಕನ್ನಡಕ್ಕೆ—**ಮಹೇಶ್ವರಿ ಯು.**

---

## ಗೆಳೆಯನಿಗೆ…ಪ್ರೀತಿಯಿಂದ…

ಗೆಳೆಯ, ಬರಬೇಡವಷ್ಟು ಹತ್ತಿರ
ನೀನೆದುರಿಗಿದ್ದಾಗ
ಕಣ್ಣುಗಳಲ್ಲಿ ನಿನ್ನ ಪ್ರತಿಬಿಂಬ
ಸರಿಯುವೆಯಾ ಸ್ವಲ್ಪ ದೂರ
ಹೊಸಬೆಳಕಲ್ಲಿ ಪ್ರಪಂಚ ಪ್ರತಿಫಲಿಸಲಿ.

ಗೆಳೆಯ, ನಿನ್ನ ಕಣ್ಣುಗಳಾಳದಲ್ಲಿ
ಮುಳುಗುವಾಸೆ
ಆದರೆ, ಬೇಡ ಬಿಡು
ಈಜು ತಿಳಿಯದು ನನಗೆ
ಮುಳುಗಿ ಹಾಗೇ ಉಸಿರುಕಟ್ಟಿದರೆ
ನನಗೇನೋ ಜೀವನಪೂರ್ತಿ
ಜೀವಿಸುವಾಸೆ.

ಗೆಳೆಯ, ಬರಬೇಡವಷ್ಟು ಹತ್ತಿರ
ನಿನ್ನ ನೋಟವನ್ನಷ್ಟೆ ಪ್ರೀತಿಸುವೆ,
ಮತ್ತದು ಕೊಡುವ ಪುಳಕಗಳನ್ನು
ಯೌವ್ವನದ ಚರಿತ್ರೆಯಲ್ಲಿ ದಾಖಲಿಸುವೆ
ಹತ್ತಿರ ಮಾತ್ರ ಬರಬೇಡ
ನೋಟ ತಪ್ಪುವಷ್ಟು ಹತ್ತಿರ!

—ಚಿತ್‌ಪ್ರಭಾ

# ಅಧಿಕಾರ ವಿಕೇಂದ್ರೀಕರಣ : ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರ

ಶ್ರೀಮತಿ ಸುಮನ್ ಕೋಲಾರ

ಭಾರತ ದೇಶದ ಜನಸಂಖ್ಯೆಯಲ್ಲಿ ಮಹಿಳೆಯರು ಶೇಕಡಾ 50ರಷ್ಟಿದ್ದು, ಅದರಲ್ಲಿ ಶೇಕಡಾ 75ರಷ್ಟು ಮಹಿಳೆಯರು ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಕುಟುಂಬದ ಸಮಾಜದ ಕಾರ್ಯ ನಿರ್ವಹಣೆಯಲ್ಲಿ ಮಹಿಳೆಯರ ಪಾತ್ರ ಗಣನೀಯವಾಗಿದೆ. ಅದಾಗ್ಯೂ ಕೂಡಾ ಪುರಾತನ ಕಾಲದಿಂದಲೂ ಮಹಿಳೆಯು ಸಾಗಿಬಂದ ದಾರಿ ಅವಲೋಕಿಸಿದಾಗ ಪುರುಷ ಪ್ರಧಾನವಾದ ಈ ಸಮಾಜ, ಮನುವಿನ ಕಾಲದಿಂದ ಹಿಡಿದು ಸುಧಾರಿಸಿದ ಕಾಲವೆಂದು ಕರೆಯಲ್ಪಡುವ ಇಲ್ಲಿಯವರೆಗೆ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕಣಿಕವಾಗಿ ಹಾಗೂ ರಾಜಕೀಯವಾಗಿ ಮಹಿಳೆಯು ನಿರ್ಲಕ್ಷಣೆಗೊಳಗಾಗಿದ್ದಾಳೆ.

ಬದಲಾಗುತ್ತಿರುವ ಕಾಲಕ್ಕೆ ತಕ್ಕಂತೆ ಮಹಿಳೆಯೂ ಕೂಡಾ ಬದಲಾಗುತ್ತಿದ್ದು, ಎಲ್ಲ ರಂಗಗಳಲ್ಲಿ ತನ್ನ ಇರುವಿಕೆಯನ್ನು ವ್ಯಕ್ತಪಡಿಸುತ್ತಿದ್ದಾಳೆ. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರು ತೋರಿದ ಸಾಹಸ, ಸಹಕಾರ ಅಪಾರವಾಗಿದೆ. ಭಾರತದೇಶ ಸ್ವಾತಂತ್ರ್ಯ ಪಡೆದ ನಂತರ, ಮಹಿಳೆಯು ಪುರುಷನಿಗೆ ಸರಿಸಮಾನವಾಗಿ ಕೆಲಸ ನಿರ್ವಹಿಸಿ ಕುಟುಂಬದ ಆರ್ಥಿಕ ಹಾಗೂ ದೇಶದ ಆರ್ಥಿಕ ವ್ಯವಸ್ಥೆಯ ಸುಧಾರಣೆಯಲ್ಲಿ ಪ್ರಮುಖ ಪಾಲುದಾರರಾಗಿದ್ದಾಳೆ, ಭಾರತದ ಸಂವಿಧಾನ ಪ್ರಕಾರ ಎಲ್ಲಾ ರಂಗದಲ್ಲಿ ಮಹಿಳೆಯು ಪುರುಷನಿಗೆ ಸರಿಸಮಾನ ಹಕ್ಕನ್ನು ಪಡೆದಿದ್ದಾಳೆ. ಆದಾಗ್ಯೂ ಕೂಡಾ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ರಾಜಕೀಯ ರಂಗಗಳಲ್ಲಿ ಮಹಿಳೆಯ ಪಾತ್ರ ಅಷ್ಟೊಂದು ಆಶಾದಾಯಕವಾಗಿ ಕಂಡುಬರುವುದಿಲ್ಲ.

ರಾಜಕೀಯ ರಂಗದಲ್ಲಿ ಮಹಿಳೆಯರ ಪಾಲುಗಾರಿಕೆ ಅತ್ಯಲ್ಪವೆಂದೇ ಹೇಳಬೇಕು. ಸಂವಿದಾನದ ಪ್ರಕಾರ ಪುರುಷನಿಗೆ ಸರಿಸಮಾನ ಹಕ್ಕು ನೀಡಿದ್ದಾಗ್ಯೂ ಕೂಡಾ, ಶಾಸನ ಸಭೆ, ಲೋಕಸಭೆ, ನಗರಸಭೆ, ಪಂಚಾಯತಿ ಹಾಗೂ ಸಂಘ-ಸಂಸ್ಥೆಗಳಲ್ಲಿ ಚುನಾಯಿತ ಮಹಿಳೆಯರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ.

ಮಹಿಳೆಯರು ರಾಜಕೀಯವಾಗಿ ಮುಂದೆ ಬರಬೇಕು. ಮಹಿಳೆಯರ ಪಾಲುಗಾರಿಕೆ ಬಹಳ ಮಹತ್ವವೆಂದು ಅರಿತ ಕರ್ನಾಟಕ ರಾಜ್ಯ ಸರಕಾರ ಜಿಲ್ಲಾ ಪರಿಷತ್ ಕಾಯ್ದೆಯನ್ನು ಜಾರಿಗೆ ತಂದು ಶೇಕಡಾ 25ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಾಗಿರಿಸಿ ಒಂದು ಕ್ರಾಂತಿಯನ್ನೇ ಮಾಡಿದೆ.

1987ರಲ್ಲಿ ಮಂಡಳ ಪಂಚಾಯತಿ ಕಾಯ್ದೆಯನ್ನು ಜಾರಿಗೆ ತರುವಾಗ ಮೀಸಲಾತಿಯ ಶೇಕಡಾ 25ರಷ್ಟು ನೀಡಿಕೆಯನ್ನು ಅನೇಕರು ವಿರೋಧ ವ್ಯಕ್ತಪಡಿಸಿ ವಿಳಂಬಗೊಳಿಸಿದ್ದುಂಟು. ಮಹಿಳೆಯರಿಗೆ ಒಟ್ಟು ಸ್ಥಾನದಲ್ಲಿ ಶೇಕಡಾ 25 ಭಾಗದಷ್ಟು ಮೀಸಲಾತಿ ನೀಡಿದ್ದೇ ಆದರೆ, ಚುನಾವಣೆಯಲ್ಲಿ ಸ್ಪರ್ಧಿಸುವ ಮಹಿಳಾ ಅಭ್ಯರ್ಥಿಗಳು ಸಿಗುವುದು ದೂರದ ಮಾತು. ಕಾರಣ ಮೀಸಲಾತಿ ಕೈಬಿಡಬೇಕೆಂದು ಒಂದು ವಾದ ಕೇಳಿ ಬಂದಿತು, ಅದಕ್ಕೆ ಉತ್ತರವಾಗಿ ಜಿಲ್ಲಾ ಪರಿಷತ್ ಮತ್ತು ಮಂಡಳ ಪಂಚಾಯತಿಗಳ ಚುನಾವಣೆಯಲ್ಲಿ ಸುಮಾರು 28000 ಕ್ಕಿಂತಲೂ ಅಧಿಕವಾಗಿ ರಾಜ್ಯದ ಪಂಚಾಯತ ಮತು ಜಿಲ್ಲಾ ಪರಿಷತ್ ಚುನಾವಣೆಯಲ್ಲಿ ಸ್ಪರ್ಧಿಸಿ, 14000 ಮಹಿಳಾ ಪ್ರತಿನಿಧಿಗಳು ಆಯ್ಕೆಯಾಗಿ ವಿಕೇಂದ್ರೀಕರಣ ಲಾಭ ಪಡೆದರಲ್ಲದೆ, ರಾಜ್ಯದ 20 ಜಿಲ್ಲೆಗಳಲ್ಲಿ 4 ಜಿಲ್ಲಾ ಪರಿಷತ್‌ಗಳಲ್ಲಿ ಮಹಿಳಾ ಉಪಾಧ್ಯಕ್ಷರಾಗಿ ಆಯ್ಕೆಯಾಗಿ ಐದು ವರ್ಷಗಳವರೆಗೆ ದಕ್ಷ ಹಾಗೂ ಪ್ರಾಮಾಣಿಕತೆಯಿಂದ ಸೇವೆ ಸಲ್ಲಿಸಿ, ಮಹಿಳೆಯೂ ಕೂಡಾ ಆಡಳಿತ ನಡೆಸುವಲ್ಲಿ ಸಮರ್ಥನಿಯರು ಎಂದು ತೋರಿಸಿಕೊಟ್ಟಿದ್ದಾರೆ.

ಮಹಿಳೆಯು ಅನಕ್ಷರಸ್ಥಳಾಗಿದ್ದು. ಮೂಢನಂಬಿಕೆಗಳ ತವರಾಗಿದ್ದಾಳೆ. ಸಂಸ್ಕೃತಿಯ ಗಂಧವರಿಯದ ಮಹಿಳೆಯವರಿಂದ ಉತ್ತಮ, ದಕ್ಷ ಹಾಗೂ ಪ್ರಾಮಾಣಿಕ ಆಡಳಿತ ನಿರೀಕ್ಷಿಸುವುದು ತಪ್ಪು ಎಂಬ ಪದಕ್ಕೆ ಮಹಿಳೆಯರು ದಿಟ್ಟ ಉತ್ತರ ನೀಡಿದ ಉದಾಹರಣೆಗಳು ಹೇರಳವಾಗಿವೆ.

ಒಂದು ಮಂಡಳದ ಪ್ರಧಾನರಾಗಿ ಮಹಿಳೆ ಆಯ್ಕೆಯಾದಳು. ಆಯ್ಕೆಯ ನಂತರ ತಾವು ತಪ್ಪು ಮಾಡಿದೆವೆಂಬ ಮನೋಭಾವನೆ ಹೊಂದಿ, ಆಯ್ಕೆ ಮಾಡಿದವರೇ ಮಹಿಳೆ ಆಡಳಿತ ನಡೆಸುವಲ್ಲಿ ಕಷ್ಟ, ತೊಂದರೆಯನ್ನು ಮುಂದೆ ಮಾಡಿ ಅವಳು ರಾಜೀನಾಮೆ ನೀಡುವಂತೆ ಮಹಿಳಾ ಪ್ರಧಾನರಿಗೆ ಒತ್ತಾಯ ತಂದರು. ಆದರೆ ಮಹಿಳೆಯು ಎದೆಗುಂದದೇ ತಾವು ವಹಿಸಿಕೊಂಡಿದ್ದ ಪ್ರಧಾನರ ಸ್ಥಾನಾಧಿಕಾರವನ್ನು ಸುರಳಿತವಾಗಿ, ವ್ಯವಸ್ಥಿತವಾಗಿ ಉಪಯೋಗಿಸಿ 5 ವರ್ಷ ಪ್ರಧಾನರಾಗಿ ಯಶಸ್ವಿಯಾಗಿ ಆಡಳಿತ ನಡೆಸಿ ಉತ್ತಮ ಆಡಳಿತಗಾರಳೆಂಬ ಕೀರ್ತಿಗೆಪಾತ್ರಳಾದಳು.

ಕೆಲವೊಂದು ಅಧಿಕಾರ ವರ್ಗದವರು ಕಚೇರಿ ವೇಳೆ ಹಾಗೂ ಸಭೆಗಳಲ್ಲಿ ಭಾಗವಹಿಸುವ ಕಾಲಕ್ಕೂ ಕೂಡಾ ಮದ್ಯಪಾನ ಸೇವಿಸಿ ಹಾಜರಾಗುವುದನ್ನು ಜಿಲ್ಲಾ ಪರಿಷತ್ ಮಹಿಳಾ ಸದಸ್ಯರ ಗಮನಕ್ಕೆ ಬಂದ ತಕ್ಷಣವೇ ಅಂತಹ ಅಧಿಕಾರಗಳ ವಿರುದ್ಧ ಕಾನೂನು ರಿತ್ಯಾ ಕ್ರಮ ಕೈಕೊಳ್ಳಲಾಯಿತು. ಪುರುಷ ಪ್ರತಿನಿಧಿಗಳು ಸಭೆ ನಡೆಯುವ ಸಂದರ್ಭಗಳಲ್ಲಿ ದೂಮ್ರಪಾನ ಮಾಡುವುದಕ್ಕೆ ವಿರೋಧ ವ್ಯಕ್ತಪಡಿಸಿ ಸಭೆಗಳಲ್ಲಿ ಹಾಗೂ ಕಛೇರಿಗಳಲ್ಲಿ ದೂಮ್ರಪಾನ ನಿಷೇಧವನ್ನು ಕಡ್ಡಾಯ ಮಾಡಲಾಯಿತು. ಮಹಿಳೆಯರು ಸಭೆಯ ಘನತೆ ಎತ್ತಿ ಹಿಡಿಯುವುದರ ಜೊತೆಗೆ ನೀತಿಯ ಪಾಠವನ್ನು ತಿಳಿಸಿದರು.

ಎಷ್ಟೋ ಮಹಿಳಾ ಪ್ರತಿನಿಧಿಗಳು ತಮ್ಮ ಕ್ಷೇತ್ರದಲ್ಲಿ ನಡೆಯುವ ಪ್ರತಿಯೊಂದು ಕಾಮಗಾರಿಗಳನ್ನು ಸ್ವಂತ ಪರಿಶೀಲನೆಮಾಡಿ, ಕಾರ್ಯದಲ್ಲಿ ಎಸಗಿದ ದುರ್ವ ವ್ಯವಹಾರ ಬೆಳಕಿಗೆ ತರುವದಲ್ಲದೆ, ಆದ ವ್ಯವಹಾರ ಸರಿಪಡಿಸಿದ ಕಾರ್ಯ ಮಹಿಳಾ ಪ್ರತಿನಿಧಿಗಳು ಮಾಡಿ. ಆಡಳಿತದಲ್ಲಿ ಪ್ರಮಾಣಿಕತೆಯನ್ನು ಎತ್ತಿಹಿಡಿದು ಆಚರಣೆಯಲ್ಲಿ ತಂದಿದ್ದಾರೆ.

ಮಹಿಳೆಯರು ತಮ್ಮ ಪ್ರತಿನಿಧಿತ್ವ ಸ್ಥಾನಮಾನಗಳನ್ನು ಅರಿತು, ತಕ್ಕಂತೆ ಪ್ರತಿಯೊಂದು ಸಭೆಗಳಿಗೂ ಹಾಜರಾಗುವದು, ಯೋಜನೆಯ ರೂಪರೇಶೆಗಳನ್ನು ತಿಳಿದುಕೊಳ್ಳುವದರ ಜೊತೆಗೆ ರಾಜ್ಯ ಸರಕಾರ ಹಾಗೂ ಕೇಂದ್ರ ಸರಕಾರದ ಅನೇಕ ಯೋಜನೆಗಳಲ್ಲಿ ಮಹಿಳೆಯರಿಗೆ ಮಿಸಲಾದ ಯೋಜನೆಗಳ ಬಗ್ಗೆ ಅರಿತು, ಅವುಗಳ ಕಾರ್ಯರೂಪಕ್ಕೆ ತರುವದು ಹಾಗೂ ಹಳ್ಳಿಯ ಪತ್ರಿಯೊಬ್ಬ ಮಹಿಳೆಯರಿಗೂ ಯೋಜನೆಯ ಪ್ರತಿಫಲ ಮುಟ್ಟುವ ಘನ ಕಾರ್ಯ ಮಹಿಳಾ ಪ್ರತಿನಿಧಿಗಳು ಮಾಡಿರುತ್ತಾರೆ. ಮಹಿಳೆಯರು ದಕ್ಷತೆ, ಪ್ರಾಮಾಣಿಕತೆ, ನಿಷ್ಠೆ ಹಾಗೂ ಜವಾಬ್ದಾರಿಯುತವಾಗಿ ತಾನು ಪ್ರತಿನಿಧಿಸಿದ ಕ್ಷೇತ್ರದ ರಸ್ತೆ ದುರಸ್ತಿ, ಆರೋಗ್ಯ ಸುಧಾರಣೆ, ಜನಸಂಖ್ಯೆ ನಿಯಂತ್ರಣ, ಶಿಕ್ಷಣ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ, ಹಿಂದುಳಿದ ವರ್ಗದವರ ಹಾಗೂ ಮಹಿಳೆಯರ ಆರ್ಥಿಕ ಅಭಿವೃದ್ಧಿ ಜೊತೆಗೆ ಕ್ಷೇತ್ರದ ಸರ್ವೋತೋಮುಖಿ ಅಭಿವೃದ್ಧಿಯಲ್ಲಿ ಮಹಿಳೆ ಸಾಧಿಸಿದ ಪ್ರಗತಿ ಅಪಾರವಾಗಿದೆ.

ಕರ್ನಾಟಕ ರಾಜ್ಯದಲ್ಲಿಯ ಮಂಡಳ ಪಂಚಾಯತ, ಜಿಲ್ಲಾ ಪರಿಷತ್ ಮುಖಾಂತರ ಸಾಧಿಸಿದ ಅಭಿವೃದ್ಧಿ ಕಾರ್ಯಗಳ ಪ್ರಗತಿಯನ್ನು ಮನಗಂಡ ಕೇಂದ್ರ ಸರಕಾರವು ದೇಶದ ಎಲ್ಲ ರಾಜ್ಯಗಳಿಗೂ ಅಧಿಕಾರ ವಿಕೇಂದ್ರಿಕರಣಗೊಳಿಸಲ್ಪಟ್ಟರೆ ಅಭಿವೃದ್ಧಿಯ ಪ್ರಗತಿ ತೀವ್ರಗತಿಯಲ್ಲಿ ಸಾಗಿ ಆರ್ಥಿಕ ಸುಧಾರಣೆಯಾಗುವುದು ಸಾಧ್ಯವೆಂದು ಹಾಗೂ ಕೆಳಮಟ್ಟದಿಂದ ನಾಯಕತ್ವ ಬೆಳೆಯಲು ನೇರವಾಗಿ ಪ್ರಜಾಪ್ರಭುತ್ವ ವ್ಯವಸ್ಥೆ ಸುಭದ್ರವಾಗುವದೆಂದು ಅರಿತ ಕೇಂದ್ರ ಸರಕಾರವು ಪಂಚಾಯತ ರಾಜ್ಯಕ್ಕೆ ಸಂಬಂಧಿಸಿದ ಸಂವಿಧಾನ 73ನೇ ಕಲಂ ತಿದ್ದುಪಡಿ ಮಾಡಿರುವದರ ಜೊತೆಗೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗದವರಿಗೆ ಹಾಗೂ ಮಹಿಳೆಯರಿಗೆ ಶೇಕಡಾ $\frac{1}{3}$ ರಷ್ಟು ಮೀಸಲಾಯಿತಿಯ ರೋಸ್ಟರ ಪದ್ಧತಿಯನ್ನು ಅಳವಡಿಸಿಕೊಂಡು ಪಂಚಾಯತ ರಾಜ್ ಕಾಯ್ದೆ 73ನೇ ಕಲಂನ್ನು ತಿದ್ದುಪಡಿ ಮಾಡಿ ಜಾರಿಗೊಳಿಸಿದ್ದು, ತುಂಬಾ ಸ್ವಾಗತ ಕಾರ್ಯವಾಗಿದೆ. ಈ ಒಂದು ಕಾರ್ಯ, ಯಶಸ್ವಿಯಾಗಿ ಜಾರಿಯಾಗಬೇಕಾಗಿದೆ. ಅದರ ಜೊತೆಗೆ $\frac{1}{3}$ ಮಿಸಲಾತಿಯನ್ನು ರೋಸ್ಟರ ಪದ್ಧತಿಯ ತಿದ್ದುಪಡಿಯ ಅಳವಡಿಕೆಯ ಉಪಯೋಗ ಸಕಲರಿಗೂ ದೊರೆಯುವಂತೆಯಾಗಲು ನಾಯಕ ಮುಖಂಡರುಗಳು ಅದರಲ್ಲೂ ವಿಶೇಷವಾಗಿ ಮಹಿಳಾ ನಾಯಕರುಗಳ ಕಾರ್ಯ ಬಹುಮುಖ್ಯವಾಗಿರುತ್ತದೆ.

ಪಂಚಾಯತ ರಾಜ್ಯ ವ್ಯವಸ್ಥೆಯನ್ನು ಸರಿಯಾದ ಅರ್ಥದಲ್ಲಿ ಜಾರಿಗೊಳಿಸಿದಲ್ಲಿ ನಾವು ದೇಶ ಎದುರಿಸುತ್ತಿರುವ ಜ್ವಲಂತ ಸಮಸ್ಯೆಗಳಾದ ಜಾತಿಯ ಮತೀಯ ಗಲಭೆಗಳು, ಮತ್ತು ಮತೀಯ ಹಿಂಸಾಚಾರವನ್ನು ತಡೆಗಟ್ಟಿ ದೇಶದ ಅಖಂಡತೆ ಮತ್ತು ಐಕ್ಯತೆಯನ್ನು ಕಾಪಾಡಿಕೊಂಡು ಬರಲು ಸಹಾಯಕವಾಗುವದು.

## ಕಾಡುವ ಪ್ರಶ್ನೆಗಳು

**ನಿರ್ಮಲಾ ಆನವಟ್ಟಿ**

ನಾನೇಕೆ ಹಾಡುತ್ತಿಲ್ಲ....?
ಮುದ್ದುಮಾಟದ ಹುಡುಗಿ ಮೊಗ್ಗು ಬಿರಿದು ಕುಂತಾಗ
ನಾನ್ಯೇಕೆ ನಗುತ್ತಿಲ್ಲ....?
ವಿದೂಷಕನ ಹಾಸ್ಯಕ್ಕೆ ಸಭಾಂಗಣವೆ ಗಹಗಹಿಸಿ ನಗುವಾಗ
ನಾನೇಕೆ ನೋಡುತ್ತಿಲ್ಲ....?
ತೇಲು ಹಕ್ಕಿಗಳು ಮೋಡಗಳ ತುಣುಕ ತಿವಿ ತಿವಿದು
ಹನಿನೀರ ಕೊಕ್ಕಿನಲಿ ಹಣಿಸಾಡುವಾಗ
ನಾನೇಕೆ ಕೇಳುತ್ತಿಲ್ಲ....?
ತುಟಿಮೀರದ ಹೊಸ ವಡಪುಗಳ;
ವರಸೆಗಳ ಹಿಡಿದಿಡುವ ವೀರಗಾಥೆಗಳ
ನಾನೇಕೆ ಚಿತ್ರಿಸುತ್ತಿಲ್ಲ....?
ಅಂತ್ಯದಂಚಿಗೆ ಅಂಟಿಕೊಂಡ-ಹುಟ್ಟು;
ಬಟ್ಟಲಿನಲ್ಲಿ ಹಾಲುಕ್ಕಿಸುವ ಕಲೆಯ
ನಾನೇಕೆ ಸವಿಯುತ್ತಿಲ್ಲ....?
ಬೆವರಿಂದ ತೊಯ್ದು ಒರಟು ರೊಟ್ಟಿಗಳ
ಅಂತಃಸತ್ವದ ರುಚಿಗೆ
ನಾನೇಕೆ ಕರಗುತ್ತಿಲ್ಲ....?
ಸನಿಹದಲ್ಲೆಲ್ಲೊ ಹತ್ತಿ ಉರಿಯುತ್ತಿರುವ
ಹತ್ಯಾಕಾಂಡಗಳ ದಳ್ಳುರಿಯ ಬಿಸಿಗೆ
ನಾನೇಕೆ ತೆರೆದುಕೊಳ್ಳುತ್ತಿಲ್ಲ....?
ಬಡತಾರು; ಬತ್ತಿದ ಮೊಲೆಯ ಚೀಪುವ
ಕಂದನ ಬಿಕ್ಕಳಿಕೆಗೆ
ನಾನೇಕೆ ಪ್ರಶ್ನಿಸುತ್ತಿಲ್ಲ....?
ಜೂರಿಗಳ ಅರುಗಲ್ಲಿ ಬಿಸಿರಕ್ತ
ಮೆತ್ತಿಕೊಂಡ ಕ್ರೂರತೆಯ ಬಗ್ಗೆ;
ನಾನೇಕೆ ಬರೆಯುತ್ತಿಲ್ಲ....?
ಬಿರುಗಾಳಿಗೆ ಬೆದರಿ-ಹಾರದೆ
ರೆಕ್ಕೆ ಮುದುಡಿ ಕೂತ ಹಕ್ಕಿಗಳ ಬಗ್ಗೆ....!

## ಹೀಗೊಂದು ಸ್ವಗತ

**ಡಾ. ಎಸ್.ವಿ. ಪ್ರಭಾವತಿ**

ದ್ರೌಪದಿಯ ಸ್ವಗತ
ಸೀತೆಯ ಸ್ವಗತ
ಅಹಲ್ಯೆಯ ಸ್ವಗತ
ಅಮೃತಮತಿ ಸ್ವಗತ
ಹೀಗೆ ಅವರಿವರ ಸ್ವಗತವನ್ನೇ ಹಾಡುತ್ತಾ,
ಅವರೊಳಗೆ ತಮ್ಮನ್ನು ಕಾಣುತ್ತಾ
ಎಂದೋ ಬದುಕಿಹೋದವರ ಅಥವಾ
ಬದುಕಿಯೇ ಇರದಿದ್ದವರ ಬಗ್ಗೆ,
ಅವರ ಮನಸ್ಸೆಂಬ ವಾಪಿ ಕೂಪಗಳ ಬಗ್ಗೆ
ಅದರ ಆಳ ಅಗಲದ ಬಗ್ಗೆ
ಕವಿತೆ ಬರೆಯುವ ಇಂದಿನ ಕವಿಯತ್ರಿಯರು
ತಮ್ಮ ಕವಿತೆಗೆ ಅವರ ಬಟ್ಟೆ ಕೊಟ್ಟರೇ
ವಿನಾ ಒಡಲು ಕೊಡಲಿಲ್ಲ.
ಎಂದೋ ಆಗಿಹೋದ ಕಾಲ ಹೇಗಿತ್ತೋ
ಇಂದಿನ ಆಧುನಿಕ ಯುಗ ಹೇಗಿದೆಯೋ
ಇವರಿಗೆ ಅದು ತಿಳಿಯದು
ಅವರಿಗೆ ಇದು ತಿಳಿಯದು
ಅವರುಗಳು ಇಂದು ಬದುಕಿದ್ದಿದ್ದರೆ,
ದ್ರೌಪದಿ ರೋಷಗೊಳ್ಳುತ್ತಿದ್ದಳೆ ?
ಸೀತೆ ತಲೆ ತಗ್ಗಿಸಿಯೇ ಇರುತ್ತಿದ್ದಳೇ ?
ಅಹಲ್ಯೆ ಮೋಸ ಹೋಗುತ್ತಿದ್ದಳೆ ?
ಅಮೃತಮತಿ ಜಾರಿಣಿಯಾಗುತ್ತಿದ್ದಳೇ ?
ಪ್ರಶ್ನೆಗಳು ಬರೀ ಪ್ರಶ್ನೆಗಳು.
ಈ ಇವರು ಮಾಡಿದ ಇಷ್ಟನ್ನೂ
ಒಂದು ಹೆಣ್ಣು ಒಂದೇ ಬಾರಿಗೆ
ಮಾಡುವ ಅವಕಾಶವಿರುವ ಈ ಕಾಲದಲ್ಲಿ
ಇವಳ ಸ್ವಗತವನ್ನು ಬರೆಯುವವರು ಯಾರು ?
ಅಥವಾ ಇವಳಿಗೆ ಸ್ವಗತವೇ ಇಲ್ಲವೋ ?
ಎಲ್ಲವೂ ಬಹಿರ್ಗತವೋ ?
ಮತ್ತೆ ಪ್ರಶ್ನೆಗಳು ಬರೀ ಪ್ರಶ್ನೆಗಳು

ಕಿರಣ್

ಸ್ತ್ರೀ-ಪುರುಷ ಸ್ತ್ರೀ ಮುಕ್ತಿ ಚಳುವಳಿಗೆ ಲೇಖಕಿ ಛಾಯಾ ದಾತಾರ್ ನೀಡಿರುವ ಅಭೂತ ಪೂರ್ವ ಕಾಣಿಕೆ, ಇದು ಸಮಯ ಕಳೆಯಲೆಂದು ಸರಸರನೆ ಓದಿ ಬಿಸುಡುವ ಪುಸ್ತಕವಲ್ಲ. ಹಂತ ಹಂತದಲ್ಲೂ ಓದುಗರನ್ನು ಚಿಂತನೆಯ ಒರೆಗೆ ಹಚ್ಚುವ ಪ್ರಯತ್ನದಲ್ಲಿ ಛಾಯಾ ಸಂಪೂರ್ಣ ಸಫಲರಾಗಿದ್ದಾರೆ.

ಲೇಖಕಿ, ಆತ್ಮಶೋಧನೆ ಮಾಡಿಕೊಳ್ಳುತ್ತಾ, ಸ್ತ್ರೀ ಮುಕ್ತಿ ಚಳುವಳಿ ಹುಟ್ಟು, ಬೆಳವಣಿಗೆಗಳನ್ನು ಸಮರ್ಪಕ ವಾಗಿ ನಿರೂಪಿಸಿದ್ದಾರೆ. ಅವರು ಮಂಡಿಸಿರುವ ಎಲ್ಲ ಕ್ರಾಂತಿಕಾರೀ ವಾದಗಳನ್ನು ಸಮರ್ಥಿಸಲು ಸಾಧ್ಯವಿಲ್ಲ ವಾದರೂ, ಇಂದಿನ ಯುಗದಲ್ಲಿ ಮಹಿಳಾ ಮುಕ್ತಿ ಚಳುವಳಿ ಯಶಸ್ವಿಯಾಗಲು ಛಾಯಾರಂಥ ನಾಯಕಿ ಯರು ಅಗತ್ಯವಾಗಿ ಬೇಕಾಗಿದ್ದಾರೆ ಎಂದು ನಿಸ್ಸಂದೇಹ ವಾಗಿ ಹೇಳಬಹುದು.

ಸ್ತ್ರೀಪುರುಷರಿಬ್ಬರೂ ಜೀವನ ರಥದ ಎರಡು ಗಾಲಿ ಗಳಾದರೂ, ಎಲ್ಲ ಕ್ಷೇತ್ರಗಳಲ್ಲಿ ಪುರುಷನಿಗೆ ಸರಿಸಮಾನ ಳಾಗಿ ಮಹಿಳೆ ದುಡಿಯುತ್ತಿದ್ದರೂ, ಮಾತೃ ಪ್ರಧಾನ ವಾಗಿದ್ದ ಸಮಾಜ ಕ್ರಮೇಣ ಹೇಗೆ ಪುರುಷಪ್ರಧಾನವಾಗಿ ಮಾರ್ಪಟ್ಟಿತು ? ಮಹಿಳೆ ವಿದ್ಯಾವಂತೆಯಾಗಿದ್ದರೂ, ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದು ಸ್ವಾವಲಂಬಿ ಯಾಗಿದ್ದರೂ, ಇಂದಿಗೂ ದುಯ್ಯಮ ದರ್ಜೆಯವಳೇ ಆಗಿರುವುದೇಕೆ ? ವರ್ತಮಾನ ಹಾಗೂ ಭವಿಷ್ಯದಲ್ಲಿ ಮಹಿಳೆಯ ಸ್ಥಾನಮಾನಗಳಲ್ಲಿ ಏನು ಅನುಕೂಲಕರ ಬದಲಾವಣೆಗಳು ಆದಾವು ? ಎಂಬುದರ ಬಗ್ಗೆ ಛಾಯಾರ ಅಭಿಪ್ರಾಯಗಳನ್ನು ಸಂಕ್ಷಿಪ್ತವಾಗಿ ತಿಳಿದರೆ, ಪುಸ್ತಕ ವನ್ನು ಓದಿ ಅರ್ಥಮಾಡಿಕೊಳ್ಳುವ ಅಭಿಲಾಷೆ ಮೂಡುವು ದೆಂದು ನನ್ನ ನಂಬಿಕೆ.

* ಪಾರಂಪರಿಕ ರೂಢಿಗಳನ್ನು ಬಿಟ್ಟುಬಿಡಲು ಮಹಿಳೆ ಮುಂದಾಗಬೇಕು. ಅದಕ್ಕೆ ಸಾಕಷ್ಟು ಮನೋಬಲ ಬೇಕು, ಹಳೆಯ ರೂಢಿ ಬಂಧನಗಳು ಖಾಯಂ ಇರುವುದಾದರೆ, ಸ್ತ್ರೀಯರಿಗೆ ಕ್ರಾಂತಿಯ ಚಳುವಳಿ ಯಲ್ಲಿ ಭಾಗವಹಿಸಲು ಸಿಗುವುದಿಲ್ಲ.
* ಪ್ರಜೋತ್ಪಾದನೆಯ ಉದ್ದೇಶದಿಂದ ನಿಸರ್ಗ ಸ್ತ್ರೀ ಹಾಗೂ ಪುರುಷ ಎಂಬ ಎರಡು ಭಿನ್ನ ಲಿಂಗ ಗಳನ್ನು ನಿರ್ಮಿಸಿದ್ದರೂ ಸ್ತ್ರೀ ಕನಿಷ್ಠಳು, ಪುರುಷ ಶ್ರೇಷ್ಠ ಎಂಬ ಪರಿಕಲ್ಪನೆ ಮಾತ್ರ ಮಾನವ ನಿರ್ಮಿತ.
* ಮಹಿಳೆ ಬಾಳಿನಲ್ಲಿ ಅಪೂರ್ಣತೆಯ ಭಾವನೆಯನ್ನು ಕಳೆಯಲು ಗಂಡಿನ ಪ್ರೇಮಪಾಶದಲ್ಲಿ ಸಿಲುಕಲೇ ಬೇಕೆಂದೇನೂ ಇಲ್ಲ. ಪ್ರೇಮ ಎನ್ನುವುದು ಬರಿಯ ಟೊಳ್ಳು ಕಲ್ಪನೆ. ಪ್ರೇಮದ ಹವ್ಯಾಸ ಮಹಿಳೆಯ ಏಳಿಗೆಯ ಹಾದಿಯಲ್ಲಿನ ಮುಳ್ಳು ಹಾಸು. ಮಹಿಳೆ ಇದನ್ನು ಮೀರಿ ಬಂದರೆ ಮಾತ್ರವೇ ಬದುಕಿನಲ್ಲಿ ಏನನ್ನಾದರೂ ಸಾಧಿಸಲು ಸಾಧ್ಯ.
* ಹೆಣ್ಣು ಸಂಸ್ಕಾರದಿಂದ ಮಾತ್ರ ದುರ್ಬಲಳಾಗು ವುದಿಲ್ಲ. ಶಾರೀರಿಕ ಅತ್ಯಾಚಾರ, ಬಲಾತ್ಕಾರ, ಕೊಲೆಯ ಸಾಧ್ಯತೆಗಳಿಂದ ಅವಳಲ್ಲಿ ಅರಕ್ಷಿತ ಭಾವನೆ ಮಾಡುತ್ತದೆ. ಇದರ ಪರಿಣಾಮ ಒಬ್ಬ ನಿರ್ಧಿಷ್ಟ ಹೆಣ್ಣಿನ ಮೇಲಲ್ಲ, ಇಡೀ ಸ್ತ್ರೀ ಜಾತಿಯ ಮೇಲೆ ಉಂಟಾಗುತ್ತದೆ.
* ಸ್ತ್ರೀ ಮುಕ್ತಿ ಎಂದರೆ ಸ್ವೈರಾಚಾರ ಅಲ್ಲ.
* ಗೃಹಿಣಿ 24 ಗಂಟೆಗಳ ಸೇವಕಿ ಎಂಬ ಕಲ್ಪನೆ ಯನ್ನು ತೊಡೆದಾಗ ಮಾತ್ರ ಅವಳಿಗೆ ಸ್ವಂತದ ಸಮಯ ದೊರೆತು, ಸ್ವಂತದ ವಿಕಾಸ ಸಾಧ್ಯ.
* ಎಲ್ಲ ಹೆಂಗಸರೂ ವೈಯಕ್ತಿಕ ಜೀವನದಲ್ಲಿ ಕೆಲವು ಸವಲತ್ತುಗಳನ್ನು ಪಡೆಯುವುದು, ಸ್ವಂತಕ್ಕಾಗಿ ಒಂದು ನೆಲೆ, ಸ್ಥಾನ ನಿರ್ಮಿಸಿಕೊಳ್ಳುವುದು ಅವಶ್ಯಕ.
* ಭಾರತದಲ್ಲಿ ಸ್ತ್ರೀಯರ ಮೇಲೆ ಶೀಲವಂತಿಕೆಯ ಹೆಸರಿನಲ್ಲಿ ಲೈಂಗಿಕ ಬಂಧನವನ್ನು ಹೇರಲಾಗಿದೆ. ಆದರೆ ಸ್ತ್ರೀಯರು ಮುಕ್ತ ಲೈಂಗಿಕ ಸಂಬಂಧ ಗಳನ್ನು ಹೊಂದಲು ಅನುಮತಿ ಇರುವ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲೂ ಸ್ತ್ರೀ ದ್ವಿತೀಯ ದರ್ಜೆಯವಳು, ಪುರುಷರ ಕಾಮ ಕೇಳಿಯ ಆಟದ ಗೊಂಬೆಯೇ ಆಗಿದ್ದಾಳೆ.

* ಕುಟುಂಬ ಸಂಸ್ಥೆ, ಧರ್ಮ ಸಂಸ್ಥೆ, ಶಾಸನ ಸಂಸ್ಥೆ, ಅರ್ಥವ್ಯವಸ್ಥೆ, ಮತ್ತು ಪ್ರಚಾರ ಮಾಧ್ಯಮ ಈ ಐದು ಸಂಸ್ಥೆಗಳಲ್ಲಿ ಅನುಕೂಲ ಬದಲಾವಣೆ ಆದರೆ ಮಾತ್ರ ಸ್ತ್ರೀಯರ ದಿಕ್ಕಿನಿಂದ ನಿಜವಾದ ಸಮಾಜ ಪರಿವರ್ತನೆ ಆಯಿತು ಎಂದು ಹೇಳ ಬಹುದು.
* ದೈಹಿಕ ಭಿನ್ನತೆ ಸ್ತ್ರೀ ದಾಸ್ಯದ ಮೂಲವಲ್ಲ.
* ಎಲ್ಲಿಯವರೆಗೆ ಸ್ತ್ರೀ ತನ್ನ ಸ್ವಂತ ಲೈಂಗಿಕ ಇಚ್ಛೆಯನ್ನು ಪ್ರದರ್ಶಿಸುವುದಿಲ್ಲವೋ, ಸ್ವಂತದ ಬೇಕು ಬೇಡಗಳನ್ನು ನಿಖರವಾಗಿ ಹೇಳುವುದಿಲ್ಲವೋ, ಏಕನಿಷ್ಠೆ, ಪಾತಿವ್ರತ್ಯ ಎಂಬ ಕಲ್ಪನೆಗಳಲ್ಲಿ ಹುದುಗಿಕೊಂಡು ಪುರುಷನಿಗೆ ಬೇಕು ಬೇಕಾದಾಗ ಶರೀರ ಸುಖವನ್ನು ತಕರಾರು ಮಾಡದೇ ಪೂರೈಸುತ್ತಾಳೋ ಅಲ್ಲಿಯವರೆಗೆ ಶರೀರದ ಮೇಲೆ ಪುರುಷನ ಒಡೆತನವು ಅಬಾಧಿತವಾಗಿ ಉಳಿಯುತ್ತದೆ. ಸ್ತ್ರೀ ತಾನೊಬ್ಬ ವ್ಯಕ್ತಿ ಎಂದು ತಿಳಿದುಕೊಳ್ಳಬೇಕು. ಅಂತರಂಗದಲ್ಲಿಯ ಸೂಕ್ಷ್ಮ ವಿಚಾರಗಳನ್ನು ವಿಮರ್ಶಿಸಬೇಕು. ಹಾಗೆ ಮಾಡಿದರೆ ತನ್ನ ನಿಜ ಪರಿಸ್ಥಿತಿಯ ಅರಿವು ಆಕೆಗೆ ಆದೀತು.
* ಸ್ತ್ರೀಯ ಲೈಂಗಿಕ ಸುಖದ ಕಲ್ಪನೆಯ ತಪ್ಪು ಗ್ರಹಿಕೆ ಕಳೆದು ವಾಸ್ತವ ಸಂಗತಿಯ ಅರಿವಾದರೆ ಸ್ತ್ರೀಯರಿಗೆ ಉಪಯುಕ್ತವಾಗುತ್ತದೆ.
* ಲೈಂಗಿಕ ಭಾವನೆಯು ಪ್ರೇಮವನ್ನಾಧರಿಸಿರಬೇಕು. ಅದಕ್ಕೆ ಪರಸ್ಪರರ ಸಮ್ಮತಿ ಇರಬೇಕು. ಈ ಸಂಬಂಧದಿಂದ ಗಂಡು ಹೆಣ್ಣು ಇಬ್ಬರಿಗೂ ಸರಿಸಮಾನ ಸುಖ ದೊರೆಯಬೇಕು.
* ಸ್ತ್ರೀಗೆ ಸ್ವಗೌರವ ಬೇಕಿದ್ದರೆ ಅವಳು ಸ್ವಂತದ ದೇಹದ ಮೇಲೆ, ಸ್ವಂತದ ಜೀವನದ ಮೇಲೆ ಅಧಿಕಾರವನ್ನು ಇಟ್ಟುಕೊಳ್ಳಬೇಕು. ಕುಂಟುಂಬದ ಒಳಕೆ ಹಾಗೂ ಆಚೆಯ ಸಮಾಜದ ಎಲ್ಲ ವ್ಯವಹಾರಗಳಲ್ಲಿ ಅವಳಿಗಾಗುವ ಅನ್ಯಾಯ, ಶೋಷಣೆ ತೊಲಗಬೇಕು. ಇದಕ್ಕಾಗಿ ಶೋಷಣಾ ರಹಿತ ಸಮಾಜ ನಿರ್ಮಾಣವಾಗಬೇಕು. ಅಂಥ ಸಮಾಜವನ್ನು ನಿರ್ಮಿಸಲು ಸ್ತ್ರೀಯರು ಒಂದಾಗಿ ಹೋರಾಡಬೇಕು.
* ಸ್ತ್ರೀಯರಲ್ಲಿ ಸಹಕಾರದ ಗುಣ ಇರುವುದಕ್ಕೆ 'ಮಾತೃತ್ವ' ಒಂದು ಕಾರಣ. ತನಗೆ ಹೊಟ್ಟೆಗೆ ಇಲ್ಲದಿದ್ದರೂ ಮಕ್ಕಳ ಪಾಲನೆ ಪೋಷಣೆ ಅವಳ ಕರ್ತವ್ಯವಾಗಿರುತ್ತದೆ. ಸ್ವಾರ್ಥ ತ್ಯಾಗದ ಭಾವನೆಯು ಈ ಮೂಲಕ ಉಂಟಾಗುತ್ತದೆ. ಸಹಕಾರಕ್ಕೆ ಅನುಕೂಲವಾದ ವ್ಯಕ್ತಿತ್ವ ಅವಳದಾಗುತ್ತದೆ.
* ಯಾರ ಶೋಷಣೆಯೂ ನಡೆಯಬಾರದೆಂದರೆ ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಉಚ್ಚ ವಿಚಾರಗಳನ್ನು ಹೊಂದಿರಬೇಕು. ತಿಳುವಳಿಕೆ ಉಳ್ಳವರಾಗಬೇಕು. ಸ್ವಾವಲಂಬಿಯಾಗಿರಬೇಕು, ಬಲಿಷ್ಠರಾಗಿರಬೇಕು. ಸ್ವಾತಂತ್ರ್ಯವನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿರಬೇಕು.

ಒಟ್ಟಿನಲ್ಲಿ ಸ್ತ್ರೀಮುಕ್ತಿ ಚಳುವಳಿಯ ಬಗ್ಗೆ ಪ್ರಾಂತೀಯ ಭಾಷೆಯಲ್ಲಿ ಪ್ರಕಟವಾಗಿರುವ ಉತ್ತಮ ಕೃತಿಗಳಲ್ಲಿ "ಸ್ತ್ರೀ ಪುರುಷ" ಒಂದೆಂದು ಹೇಳಬಹುದು. ಮೌಲಿಕವಾದ ವೈಚಾರಿಕ ಕೃತಿಗಳ ಅನುವಾದ ಒಂದು ಸವಾಲು. ಸರಸ್ವತೀ ರಿಸಬೂಡ ಈ ಸವಾಲನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸಿದ್ದಾರೆ.

ಯಾರಿಂದಲೂ ಯಾವ ಮಹಿಳೆಯ ಶೋಷಣೆಯೂ ನಡೆಯದಂಥ ಹೊಸ ಸಮಾಜದ ಉದಯವಾಗಲಿ. ಸ್ತ್ರೀ ತನ್ನ ಸ್ವಂತ ಅರ್ಹತೆಯ ಬಲದಿಂದ ಇತಿಹಾಸದ ಪುಟಗಳಲ್ಲಿ ಸುವರ್ಣಾಕ್ಷರಗಳಲ್ಲಿ ಉಲ್ಲೇಖಗೊಳ್ಳುವ ಕಾಲ ಶೀಘ್ರ ಬರಲಿ. ಸ್ತ್ರೀ ಪುರುಷ ಇಬ್ಬರಲ್ಲಿ ಯಾರೂ ಯಾರಿಗೂ ಅನುಚರವಾಗುವುದು ಬೇಡ, ಸಹಚರರಾಗಿದ್ದುಕೊಂಡು ಸಹಬಾಳ್ವೆ ನಡೆಸಲಿ !

## "ಮದ್ಯದಂಗಡಿಯ" ಬೀಗಮುದ್ರೆ ಒತ್ತಾಯಿಸಿ ಮಹಿಳೆಯರ ಪ್ರತಿಭಟನೆ

ಕುಡಿತ ಮಾನ, ಪ್ರಾಣವನ್ನು ಬಲಿ ತೆಗೆದುಕೊಳ್ಳುವುದರ ಜೊತೆಗೆ ಶ್ರೀಸಾಮಾನ್ಯನ ಸಾಮಾಜಿಕ ಬದುಕನ್ನು ಛಿದ್ರಗೊಳಿಸುತ್ತದೆ. ಇಂದು ಹೆಜ್ಜೆಗೊಂದರಂತೈನಾಯಿ ಕೊಡೆಗಳಂತೆ ತಲೆ ಎತ್ತಿರುವ ಮದ್ಯದಂಗಡಿಗಳು ಕುಡಿತವನ್ನು ಪ್ರೋತ್ಸಾಹಿಸುತ್ತವೆ. ಸಾಮಾಜಿಕ ಶಾಂತಿಯನ್ನು ಕದಡಿ ಕೇಕೆ ಹಾಕುತ್ತಿರುವ ಈ ಹಾಳು ಚಟಕ್ಕೆ ಸಮಾಜದ ಎಲ್ಲಾ ವರ್ಗದ ಜನರು ಬಲಿಯಾಗುತ್ತಿರುವುದು ಸತ್ಯ. ಕುಡಿತದ ದುಷ್ಪರಿಣಾಮಕ್ಕೆ ಕುಡುಕ ನೇರವಾಗಿ ಬಲಿಯಾದರೆ ಮಹಿಳೆ ಮಾನಸಿಕವಾಗಿ, ದೈಹಿಕವಾಗಿ ಈ ಚಟದ ಪರಿಣಾಮವನ್ನು ಅನುಭವಿಸುತ್ತಾಳೆ. ಕುಡುಕ ಗಂಡನ ಕಾಟ ತಾಳಲಾರದೇ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿರುವ ಅಬಲೆಯರ, ಹಸುಳೆಗಳ ಮನಮಿಡಿಯುವ ಕತೆ ದಿನನಿತ್ಯದ ಸುದ್ದಿಯಾಗಿದೆ. ಗಂಡ ಕುಡುಕನಾದರೆ ತಾನು ತನ್ನ ಮಕ್ಕಳ ಭವಿಷ್ಯಕ್ಕಾಗಿ ಹೆಣ್ಣು ಸೆಣಸಾಡುವ ರೀತಿ ಅವರ್ಣನೀಯ. ಇದು ಎಲ್ಲ ವರ್ಗದ ಜನರಿಗೂ ಅನ್ವಯವಾದರೂ, ದಿನಗೂಲಿಯನ್ನೇ ನಂಬಿ ಬದುಕುವ ಮಂದಿಗಂತೂ ಕುಡಿತ ಜೀವಮಾನದ ಶಾಪ.

ಕೊಳಗೇರಿಯಲ್ಲಿ ತಮ್ಮ ಅಮಾನವೀಯ ಬದುಕಿನ ಜೊತೆ ಜೊತೆಗೆ ಕುಡಿತದ ಚಟಕ್ಕೆ ಬಲಿಯಾಗುತ್ತಿರುವ ಅಸಂಖ್ಯಾತ ಅಮಾಯಕರ ನೋವಿಗೆ ದನಿ ನೀಡಲು ದಿನಾಂಕ 26–8–93 ರಂದು ಅಬ್ಕಾರಿ ಆಯುಕ್ತರ ಕಛೇರಿಯ ಬಳಿ ಮಧ್ಯದಂಗಡಿಯ ಬೀಗ ಮುದ್ರೆಯನ್ನು ಒತ್ತಾಯಿಸಿ ವುಮೆನ್ಸ್‌ವಾಯ್ಸ್ ನೇತೃತ್ವದಲ್ಲಿ ಮಹಿಳೆಯರು ಧರಣಿಮುಷ್ಕರವನ್ನು ನಡೆಸಿದರು.

ಪೂರ್ಣಿಮಾ ಚಿತ್ರಮಂದಿರದ ಬಳಿ ಇರುವ ರಾಮಣ್ಣ ಗಾರ್ಡನ್ ಸುತ್ತಮುತ್ತ 60 ಮದ್ಯದಂಗಡಿಗಳು ಲಾಲ್‌ಬಾಗ್ ಸಿದ್ದಾಪುರದ ಬಳಿ ಇರುವ ಹೊಂಬೇಗೌಡ ನಗರದ ಸುತ್ತಮುತ್ತ 26 ಮಧ್ಯದಂಗಡಿಗಳ ಬೀಗಮುದ್ರೆ ಒತ್ತಾಯಿಸಿ ನಡೆಸಿದ ಈ ಮುಷ್ಕರದಲ್ಲಿ ಸುಮಾರು 200 ಜನ ಮಹಿಳೆಯರು, ಪುರುಷರು ಭಾಗವಹಿಸಿದ್ದರು. ಈ ಕೊಳಗೇರಿಯಲ್ಲಿ ಕುಡಿಯುವ ನೀರು, ಅಗತ್ಯ ಸೌಲಭ್ಯಗಳ ಸೂಕ್ತ ವ್ಯವಸ್ಥೆ ಇಲ್ಲದಿದ್ದರೂ, ಸಾರಾಯಿ ಅಂಗಡಿಗಳು ಸಾರಾಯಿ ಹೊಳೆಯನ್ನು ಹರಿಸುವುದನ್ನು ಖಂಡಿಸಲಾಯಿತು. ಸಂಬಂಧಪಟ್ಟ ಅಧಿಕಾರಿಗಳನ್ನು ಭೇಟಿಯಾಗಿ, ಈ ಮಧ್ಯದಂಗಡಿಗಳ ಪರವಾನಗಿಯನ್ನು ರದ್ದುಪಡಿಸುವ ಭರವಸೆಯನ್ನು ಪಡೆಯುವಲ್ಲಿ ಮಹಿಳೆಯರು ಯಶಸ್ವಿಯಾದರು.

---

## ಮೋಸಗಾರನಿಗೆ

**ಕು|| ಜಿ. ಗಾಯತ್ರೀ ಕುಂಬ್ರಿಮನೆ**

ಏ....ಹುಡುಗಾ,
ಒಬ್ಬಳನು ಪ್ರೀತಿಸಿ
ಇನ್ನೊಬ್ಬಳ ಕೊರಳಿಗೆ
ತಾಳಿ ಬಿಗಿಯುವಾಗ
ನಾಚಿಕೆಯಾಗಲಿಲ್ಲವೆ ನಿನಗೆ ?
ಎಲ್ಲಿ ಹೋದವು ನಿನ್ನ....ಆ
ಆದರ್ಶದ ಮಾತುಗಳು–?
"ನನಗೇನು ಬೇಕಿಲ್ಲ
ಆಸ್ತಿ, ಹಣ, ಎಲ್ಲ
ನೀನಿರಲು ಜೊತೆ ಬೇರೇನು ಬೇಕಿಲ್ಲ"
ಎಂದಂದು ನುಡಿದಿದ್ದೆಯಲ್ಲ–?
ಎಲ್ಲಿ ಹೋದವು ನಿನ್ನ ಆ
ಪೌರುಷದ ಮಾತುಗಳೆಲ್ಲ–?
ಬೇರೊಬ್ಬಳು ಮೈತುಂಬ ಚಿನ್ನ
ಕೈತುಂಬ ಹಣ ಹಿಡಿದು
ಎದುರು ನಿಂತಾಗ
ಹಲ್ಕಿರಿದು ಅವಳೊಡನೆ
ಸಪ್ತಪದಿ ತುಳಿದೆಯಲ್ಲಾ–?
ಕಾಡಲಿಲ್ಲವೆ ನಿನಗಾಗ
ನನ್ನ ನೆನಪು....!?

# ಅಸಭ್ಯ ಪತ್ರಿಕೋದ್ಯಮದ ವಿರುದ್ಧ ಸಿ. ಎಫ್. ಟಿ. ಆರ್. ಐ.ನ ಮಹಿಳೆಯರ ಹೋರಾಟ

**ರತಿರಾವ್ ಮೈಸೂರು**

[ಸುಮಾರು ವರ್ಷಗಳ ಹಿಂದೆ ಅಂದರೆ 1982-83ರಲ್ಲಿ ಸಿ.ಎಫ್.ಟಿ.ಆರ್.ಐ.ನ ಸೆಂಟ್ರಲ್‌ಫುಡ್ ದುಡಿಯುವ ಮಹಿಳೆಯರು ಅನಾವಶ್ಯಕವಾಗಿ ನಿಂದಿಸಿ, ಅಶ್ಲೀಲವಾಗಿ ಕುಹಕದಿಂದ ಬರೆಯುವ ಮೈಸೂರಿನ ವಾರಪತ್ರಿಕೆಯೊಂದರ ವಿರುದ್ಧ ಹೋರಾಟ ನಡೆಸಿ ಗೆಲವು ಸಾಧಿಸಿದ ವಿಚಾರ ಬಹು ಜನರಿಗೆ ತಿಳಿದಿರಲಿಕ್ಕಿಲ್ಲ. ಇಂದಿಗೂ ಸಹ ಕೆಲವು ಪತ್ರಿಕೆಗಳು ತಮಗಾಗದ ಮಹಿಳೆಯರ ಮೇಲೆ, ಸ್ವಲ್ಪ ಹೆಸರಿರುವ ಮಹಿಳೆಯರ ಬಗ್ಗೆ ಅಶ್ಲೀಲವಾಗಿ, ಅಸಭ್ಯವಾಗಿ ಬರೆದು ಶೋಷಿಸುವುದನ್ನು ನಾವು ಕಾಣಬಹುದು. ಇಲ್ಲಿಯ ಘಟನೆ ಒಂದು ಉದಾಹರಣೆಯಷ್ಟೇ. ಸಿ.ಎಫ್.ಟಿ.ಆರ್.ಐ.ನ ಮಹಿಳಾ ಉದ್ಯೋಗಿಗಳು ಇಂತಹ ಅಸಭ್ಯ ಪತ್ರಿಕೋದ್ಯಮದ ವಿರುದ್ಧ ನಡೆಸಿದ ಹೋರಾಟ ಒಂದು ಸ್ಫೂರ್ತಿದಾಯಕವಾದದ್ದು ಎಂಬುದಕ್ಕಾಗಿ ಈ ವರದಿಯನ್ನು ಪ್ರಕಟಿಸುತ್ತಿದ್ದೇವೆ. ಈ ವರದಿಯ ಪ್ರಾರಂಭದಲ್ಲಿ ಸೂಚಿಸಲಾದ ಹೆಸರುಗಳು ಕಾಲ್ಪನಿಕ ಹೆಸರುಗಳು]

ಶೀಲಾ 'ಹಲೋ' ಎಂದು ಕರೆಯುತ್ತಾ ಸಂಭ್ರಮ ಸಡಗರದಿಂದ ತನ್ನ ದಿನಚರಿಯನ್ನು ಪ್ರಾರಂಭಿಸುವಾಕೆ. ಸ್ವಲ್ಪ ಪ್ರಸಿದ್ಧವಾಗಿರುವ ಆಕೆಗೆ ಗೆಳತಿಯರು ಅನೇಕರು. ಯಾವಾಗಲೂ ನಗುತ್ತಾ ಇದ್ದು ಬಿಡುವ ಹುಡುಗಿ ಈಕೆ. ಸಿ.ಎಫ್.ಟಿ. ಆರ್.ಐ.ನ ಆವರಣದಲ್ಲಿ ಸ್ನೇಹ ಮಯಿಯಾಗಿ 'ಹಲೋ' ಎನ್ನುತ್ತಾ ಸ್ವಚ್ಛಂದವಾಗಿ ತಿರುಗುತ್ತಿದ್ದ ಸರಳ ಸ್ವಭಾವದ ಹುಡುಗಿ ಈಕೆ. ಆಕೆಯ ವಿವಾಹದ ಮಾತುಕತೆಗಳೆಲ್ಲಾ ಆಗಷ್ಟೇ ಮುಗಿದು, ಆಕೆಯ ವಿವಾಹದ ದಿನಾಂಕವೂ ಗೊತ್ತಾಗಿತ್ತು.

ಕೃತಿ ಸ್ವಲ್ಪ ಭಿನ್ನ ವ್ಯಕ್ತಿತ್ವದವಳು ಹಿರಿಯ ವಿಜ್ಞಾನಿ. ಜೊತೆಗೆ ಅನೇಕ ಗುರುತರ ಜವಾಬ್ದಾರಿ ಹೊಂದಿದವರು. ಈಕೆ ಗಂಭೀರ ಹಾಗೂ ಧೈರ್ಯವಂತ ಹೆಂಗಸು. ಸಾಮಾಜಿಕ ಸುಧಾರಣೆಯ ಕಮಿಟಿಗಳಲ್ಲಿ ಕೆಲಸ ಮಾಡುವ ಇವರು ನಿರ್ಧರಿಸುವಂತಹ ಮುಖ್ಯ ಹುದ್ದೆಯಲ್ಲಿದ್ದವರು. ಒಳ್ಳೆಯ ಅವಕಾಶಗಳನ್ನು ಹೊಂದಿದವರು. ಆಕೆಯದು ಸಂಪ್ರದಾಯಸ್ಥ ಮನೆತನ, ಜೊತೆಗೆ ಸ್ಕೂಲಿಗೆ ಹೋಗುವ ಮಕ್ಕಳ ಜವಾಬ್ದಾರಿ ಬೇರೆ.

ಮೀನ ಚಿಕ್ಕ ವಯಸ್ಸಿನ ವಿಧವೆ. ಚಿಕ್ಕ ವಯಸ್ಸಿನಲ್ಲಿ ವೈಧವ್ಯ ಅನುಭವಿಸುತ್ತಿದ್ದರೂ, ಬದುಕನ್ನು ಸವಾಲಿನಿಂದ ಸ್ವೀಕರಿಸುವ ಪ್ರವೃತ್ತಿ ಉಳ್ಳವಳು. ಉದ್ಯೋಗದಲ್ಲಿ ನಿಷ್ಠಾವಂತೆ. ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಭಾಗವಹಿಸುವಾಕೆ. ಸಂಗೀತ ಸಾಮ್ರಾಜ್ಞೆಯಾಗಿದ್ದ ಆಕೆಗೆ ಇಂಡಿಯನ್ ಕ್ಲಾಸಿಕಲ್ ಡ್ಯಾನ್ಸ್ ಬಗ್ಗೆ ಬಹಳ ಆಧರವಿತ್ತು. ಇದಲ್ಲದೇ ಇಬ್ಬರು ಕಾಲೇಜಿಗೆ ಹೋಗುವ ಗಂಡುಮಕ್ಕಳ ಹಾಗೂ ಮದುವೆಯಾಗಬೇಕಿರುವ ಮಗಳ ಜವಾಬ್ದಾರಿ. ಶೀಲಾ, ಕೃತಿ, ಮೀನ ತಮ್ಮ ತಮ್ಮದೇ ಆದ ರೀತಿಯಲ್ಲಿ ಪ್ರಸಿದ್ಧರು ಹಾಗೂ ಸ್ನೇಹಮಯಿಗಳು.

**1982 ಜುಲೈ :** ಹೀಗೆ ಲವಲವಿಕೆಯಿಂದ ಇವರೆಲ್ಲರೂ ಇರುತ್ತಿದ್ದ ಸಂದರ್ಭ ಒಂದು ಘಟನೆಯಿಂದಾಗಿ ಹಿಂಜು ಮುಂಜಾಗಿತ್ತು. ಎಲ್ಲರಿಗಿಂತ ಹೆಚ್ಚಾಗಿ ಈ ಮೂರು ಜನ ಮಹಿಳೆಯರು ಸಿ.ಎಫ್.ಟಿ. ಆರ್.ಐ.ನ ವಾತಾವರಣದಲ್ಲಿ ಹೆಚ್ಚು ಒಂಟಿತನ ಅನುಭವಿಸುವ ಶೋಚನೀಯ ಸ್ಥಿತಿ ತಲುಪಿದ್ದರು. ಹೆಚ್ಚು ಘನತೆಯಿಂದ/ಭರವಸೆಯಿಂದ ತಿರುಗಾಡಲು ಈಗ ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಇವರ ಸಹೋದ್ಯೋಗಿಗಳೇ ಇವರನ್ನು ಸಂಶಯಾತ್ಮಕವಾಗಿ, ಅರ್ಥಪೂರ್ಣವಾಗಿ ಎಂಬಂತೆ ಗಮನಿಸುವರು. ಇವರೊಡನೆ ಹರಟಲು ಹಿಂಜರಿಯತೊಡಗಿದರು. ಇವರೊಡನೆ ಒಮ್ಮಿಂದೊಮ್ಮೆಲೇ ಮಾತುಕತೆಯನ್ನು ನಿಲ್ಲಿಸಿಬಿಟ್ಟಿದ್ದರು. ಅಗತ್ಯವಿದ್ದರೆ ಕೆಲಸಕ್ಕೆ ಸಂಬಂಧಪಟ್ಟಂತೆ ಹಲವಾರು ಶಬ್ಧಗಳನ್ನು ಮಾತನಾಡುವುದು ಅಷ್ಟೇ. ಆ ಮೂರು ಜನ ಮಹಿಳೆಯರೂ ಬೆಳಗೆನ್ನುವಷ್ಟರಲ್ಲಿ ತಮ್ಮೆಲ್ಲ ಗೆಳತಿ

ಯರನ್ನೂ ಕಳೆದುಕೊಂಡು ಬಿಟ್ಟಿದ್ದರು. ಒಂಟಿತನ ಅವರನ್ನು ಬಾಚಿಕೊಂಡು ಬರುವಂತಿತ್ತು. ಕ್ಯಾಂಟೀನ್ ಅಥವಾ ವಾಚನಾಲಯಕ್ಕೆ ಹೋಗುವುದಕ್ಕೆ ಅವರಿಗೆ ಜೊತೆ ಇಲ್ಲದಂತಾಗಿತ್ತು. ಏನಾಗಿರಬಹುದು ಈ ಹೆಂಗಸರಿಗೆ ? ಇವರಿಗೆ ಸಂಭವಿಸಿದ್ದು ನಮಗೆ-ನಿಮಗೆ ಕೂಡ ಸಂಭವಿಸುತ್ತಿರಬಹುದು, ಸಂಭವಿಸಬಹುದು.

ನೀವೆಂದಾದರೂ ಅಸಭ್ಯ/ಅಶ್ಲೀಲ ಬರವಣಿಗೆಗೆ ವಸ್ತುವಾಗಿದ್ದರೆ ಈ ನೋವು ನಿಮಗೆ ತಿಳಿಯುತ್ತದೆ, ನೀವು ಸಾಮಾಜಿಕವಾಗಿ ಬಹಿಷ್ಕೃತರಾಗಿದ್ದರೆ ಅಥವಾ ಅವಹೇಳನ ಅನುಭವಿಸಿದ್ದರೆ ಈ ಮಹಿಳೆಯರ ನೋವು ನಿಮಗೆ ಅರ್ಥವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಮನೆಗಳಲ್ಲಿ ಇವರ ಜೀವನ ನರಕಮಯವಾಗಿರುತ್ತದೆ. ಅವರ ಗಂಡ, ಮಕ್ಕಳು, ಅತ್ತೆ-ಮಾವಂದಿರು, ಹತ್ತಿರದ ಸಂಬಂಧಿಗಳು ಇವರ ಬಗ್ಗೆ ಏನೆಂದು ತಿಳಿಯುತ್ತಾರೆ. ಅವರ ಸಾಮಾಜಿಕ ಘನತೆಯ ಪ್ರಶ್ನೆ ಏನಾಗುತ್ತದೆ? ಶಾಲೆಯ ಸಹಪಾಠಿಗಳು, ಸ್ನೇಹಿತರು ಇಂತಹವರ ಮುಂದೆ ಇವರು ಹೇಗೆ ತಲೆಎತ್ತಿ ನಡೆಯುತ್ತಾರೆ? ವೈಚಾರಿಕವಾಗಿರುವ, ಶಾಂತವಾಗಿರುವ ಮನಸ್ಸು ಇದರಿಂದ ಕಲುಷಿತಗೊಳ್ಳುತ್ತದೆ, ನಿರಾಸೆಗೊಳ್ಳುತ್ತದೆ.

ಮೈಸೂರಿನ ಒಂದು ಸಣ್ಣ ವಾರ ಪತ್ರಿಕೆ ವೈಯಕ್ತಿಕವಾಗಿ ಈ ಮಹಿಳೆಯರ ಕುರಿತು ಬರೆದಿತ್ತು. ಈ ಹೆಂಗಸರು ಯಾರ ಯಾರದೋ ಜೊತೆ ಪಾರ್ಕ್‌ನಲ್ಲಿ ಕುಳಿತುಕೊಂಡ ಹಾಗೆ, ಇನ್ನೋರ್ವ ಮಹಿಳೆ 'ಬ್ಲೂ'– ಸಿನಿಮಾಗಳಲ್ಲಿ ನಟಿಸುವುದರಲ್ಲಿ ಪ್ರಸಿದ್ಧಿಯಾಗಿರುವ ಹಾಗೆ, ಅಥವಾ ಮತ್ತೋರ್ವ ಮಹಿಳೆ ಸೂಳೆಯಾಗಿರುವ ಹಾಗೆ. ಹೀಗೆಯೇ ಲೈಂಗಿಕತೆಗೆ ಸಂಬಂಧಿಸಿದ ಅಸಭ್ಯ ಬರಹಗಳನ್ನು ಈ ಪತ್ರಿಕೆಯು ಪ್ರಕಟಿಸತೊಡಗಿತ್ತು. ಮೊದಲು ಈ ರೀತಿಯ ಟೀಕೆಗಳಿಗೆ ಗುರಿಯಾದವರು ಸಿ. ಎಫ್, ಟಿ. ಆರ್. ಐ. ನ ರಿಸೆಪ್ಷನಿಸ್ಟ್ ಹಾಗೂ ಕ್ಲರ್ಕ್ ಕೆಲಸ ಮಾಡುವ ಹೆಂಗಸರು. ನಂತರ ಇದಕ್ಕೆ ಬಲಿಯಾದವರು ಮಹಿಳಾ ವಿಜ್ಞಾನಿಗಳು, ಈ ಬರಹಗಳಿಂದ ಸಿ. ಎಫ್. ಟಿ. ಆರ್. ಐ. ನ ಮಹಿಳಾ ಉದ್ಯೋಗಿಗಳನ್ನು ಅವಮಾನಗೊಳಿಸುವುದು ಪತ್ರಿಕೆಯ ಉದ್ದೇಶವಾಗಿತ್ತು. ಈ ರೀತಿಯ ಬರಹಗಳನ್ನು ಓದುವುದೇ ಆಘಾತಕರ ವಿಚಾರವಾಗಿತ್ತು. ದುಡಿಯುವ ಹೆಂಗಸರ ಬಗ್ಗೆ ಇಲ್ಲ - ಸಲ್ಲದ ಕತೆ ಕಟ್ಟುವುದು ಈ ಪತ್ರಿಕೆಯ ಮುಖ್ಯ ಉದ್ದೇವಾಗಿತ್ತು. ಪ್ರತಿ ವಾರವೂ ಆಕರ್ಷಣೀಯ ಅಸಭ್ಯ ಶೀರ್ಷಿಕೆಯಡಿಯಲ್ಲಿ ಸಿ. ಎಫ್. ಟಿ. ಆರ್. ಐ ಮಹಿಳಾ ಉದ್ಯೋಗಿಗಳ ಬಗ್ಗೆ ಅಶ್ಲೀಲ ಬರಹಗಳನ್ನು ಪ್ರಕಟಿಸಲಾಗುತ್ತಿತ್ತು. 'ಸಿ. ಎಫ್. ಟಿ. ಆರ್. ಐ –ಸಂಶೋಧನೆ ಅಥವಾ ಸೂಳೆಗಾರಿಕೆ ಕೇಂದ್ರ'; 'ದೇಹದ ಸಂಶೋಧನೆ', 'ಈ ಅಶ್ಲೀಲ ಕೇಂದ್ರವನ್ನು ರೈಡ್ ಮಾಡಿ' – ಇತ್ಯಾದಿ. ಇವು ಪ್ರತಿಯೊಬ್ಬ ಮನುಷ್ಯನಿಗದ ನಾಚಿಕೆ ತರಿಸುವಂತಾಗಿದ್ದವು. ಈ ಕಾರಣಕ್ಕಾಗಿ ಈ ಪತ್ರಿಕೆ ಬಿಸಿ ಬಿಸಿಯಾಗಿ ಮಾರಾಟವಾಗುತ್ತಿತ್ತಲ್ಲದೇ, ಟೇಬಲ್‌ಗಳ ಕೆಳಗೆ ಕದ್ದು ಓಟಾಡುತ್ತಿತ್ತು. ಇಂತಹ ಬರಹಗಳಿಂದಾಗಿ ಅರ್ಥಪೂರ್ಣ ನೋಟಗಳು, ಸಂಶಯಾತ್ಮಕ ದೃಷ್ಟಿಕೋನಗಳು ಇನ್ನೂ ಹೆಚ್ಚಾಗತೊಡಗಿದವು. ಒಂದು ದಿನ ಒಬ್ಬಳ ಹೆಸರು, ಇನ್ನೊಂದು ದಿನ ಇನ್ನೊಬ್ಬಾಕೆಯದು. ಹೀಗೆ ಈ ತರಹದ ಇಲ್ಲ-ಸಲ್ಲದ ಬರಹಗಳು ಮುಂದುವರಿಯುತ್ತಾ ಹೋಗುತ್ತವೆ. ನಿಮ್ಮ ಬಗ್ಗೆ ಈ ಮಾತುಗಳು ಅಲ್ಲದಿರುವವರೆಗೆ ಈ ಅಸಭ್ಯ ಬರಹಗಳ ನಿಮಗೆ ಜ್ಯೂಸ್ ಕುಡಿದ ಹಾಗೆ. ಕೆಲವರು 'ಹೊಗೆ ಇಲ್ಲದೆ ಬೆಂಕಿ ಇರುತ್ತದೆಯೇ' ಎನ್ನುವರು. ಅದು ಅವರ ಹೆಸರು ಮರುದಿನ ಪತ್ರಿಕೆಯಲ್ಲಿ ಕಾಣಿಸುವವರೆಗೆ ಮಾತ್ರ. ಕೆಲವರು ಈ ಪತ್ರಿಕೆ ನೋಡುವುದೇ ಬೇಡ ಎಂದು ಸಲಹಿಸಿದರು. ಅತ್ಯುತ್ತಮ ವಿಧಾನ ಎಂದರೆ ನಿರ್ಲಕ್ಷ್ಯ ಎಂದು ಕೆಲವರು. ಕೆಲವರು ಈ ವಾರಪತ್ರಿಕೆಯನ್ನು ಕೋಪದಿಂದ ಖಂಡಿಸಿ ಮಾತನಾಡಿದರು. ತಮ್ಮ ಕೌಟುಂಬಿಕ ಪರಿಸರ ಉತ್ತಮವಾಗಿರವ ಭರವಸೆ ಹೊಂದಿರುವ ಕೆಲವರು ಆ ಪತ್ರಿಕೆ ತಮ್ಮನ್ನು ಹೆಸರಿಸುವುದಿಲ್ಲ ಎಂದು ಬಗೆದಿದ್ದರು. ಆದಾಗ್ಯೂ ಇನ್ನು ಕೆಲವರು ತಮ್ಮ ಸಹೋದ್ಯೋಗಿಗಳ ಹಾಗೆ ತಮ್ಮ ಹೆಸರೂ ಬರಬಹುದೇನೋ ಎಂಬ ಆತಂಕದಲ್ಲಿ ಮುಂದಿನ ವಾರ ಯಾರ ಹೆಸರು ಬರಬಹುದೆಂದು ಗಂಭೀರವಾಗಿ ಯೋಚಿಸುವರು. ಅಸಹಾಯಕತೆ, ನಾಚಿಕೆ, ಅನುಮಾನಗಳ ಕಣ್ಣೀರು ಸಾಮಾನ್ಯ ನೋಟವಾಗಿತ್ತು.

ಬಹುಮಂದಿ ಮಹಿಳಾ ಉದ್ಯೋಗಿಗಳು ಈ ರೀತಿಯ ಅಸಭ್ಯ ಬರಹಗಳನ್ನು ತಡೆಗಟ್ಟಬೇಕೆಂದು ಆಲೋಚಿಸತೊಡಗಿದರು. ಕೋಪದಿಂದ ರೇಗಾಡುವುದು, ವೈಯಕ್ತಿಕವಾಗಿ ಇನ್ನೊಬ್ಬರನ್ನು ಬಯ್ಯುವುದು ಏನೂ ಪರಿಹಾರವನ್ನು ಸೂಚಿಸುವುದಿಲ್ಲ ಎಂಬುದನ್ನು ಇವರು ಅರಿಯ

ತೊಡಗಿದ್ದರು. ಎಲ್ಲರೂ ಸೇರಿ ಸ್ವಯಂ ಸ್ಫೂರ್ತಿ, ಪ್ರೇರಣೆಯಿಂದ ಒಂದು ಮನವಿ ಬರೆದೆವು. ಸಿ. ಎಫ್. ಟಿ. ಆರ್. ಐ. ಮಹಿಳಾ ಉದ್ಯೋಗಿಗಳು ಅಸಭ್ಯ ಬರವಣಿಗೆಯ ವಸ್ತುವಾಗುತ್ತಿರುವ ಬಗ್ಗೆ ವಿವರಿಸಿ, ಮಹಿಳೆಯರ ಅಳಲನ್ನು ಈ ಮನವಿಯಲ್ಲಿ ವಿವರಿಸಲಾಗಿತ್ತು. 88 ಮಹಿಳಾ ಉದ್ಯೋಗಿಗಳ ಸಹಿಯನ್ನು ಈ ಮನವಿ ಪತ್ರ ಒಳಗೊಂಡಿತ್ತು. ಇದನ್ನು ಮೈಸೂರು ವಿಭಾಗದ ಜಿಲ್ಲಾಧಿಕಾರಿ, ಪೋಲೀಸ್ ಸೂಪರಿನ್‌ಟೆನ್‌ಡೆಂಟ್, ಬೆಂಗಳೂರಿನ ಐ. ಜಿ. ಪಿ.: ಕರ್ನಾಟಕದ ಮುಖ್ಯಮಂತ್ರಿಗಳಿಗೆ ಕಳುಹಿಸಲಾಯಿತು. ಈ ರೀತಿ ಸಹಿ ಸಂಗ್ರಹಣೆ ಮಾಡುವ ಸಂದರ್ಭದಲ್ಲ ಮಹಿಳಾ ಉದ್ಯೋಗಿಗಳ ನಡುವೆ ತಾವೆಲ್ಲ ಒಂದು ಎಂಬ ಭಾವನೆ ಬಲವಾಗಿ ಮೂಡ ತೊಡಗಿತ್ತು. ಸಹಿ ಮಾಡಿದ್ದರಿಂದಲೇ ತಾವು ವಿರೋಧಿಸುತ್ತಿದ್ದೇವೆ ಎಂಬ ಭಾವನೆ ಮೂಡಿ ಕೆಲವು ಹೆಂಗಸರಿಗೆ ರಿಲೀಫ್ ಸಿಕ್ಕ ಹಾಗೆ ಅನ್ನಿಸತೊಡಗಿತ್ತು. ಅತ್ಯಂತ ನಾಚಿಕೆಯ ಸ್ವಭಾವದ ಉದ್ಯೋಗಿಯಲ್ಲಿಯೂ ಒಂದು ರೀತಿಯ ಭರವಸೆ ಬೆಳೆಯತೊಡಗಿತ್ತು. ಎಲ್ಲರೂ ಒಟ್ಟಾಗಿ ಈ ಹೋರಾಟದ ಹೆಜ್ಜೆಯನ್ನು ಸ್ವಾಗತಿಸಿದರು. ಇದು ಒಂದು ಭರವಸೆಯ ಹೆಜ್ಜೆಯಾಗಿತ್ತು. ಮಹಿಳಾ ಉದ್ಯೋಗಿಗಳು ತಾವು ಒಂಟಿ, ಅಸಹಾಯಕರು ಎಂಬ ಪ್ರಜ್ಞೆ ಕ್ರಮೇಣವಾಗಿ ಕಡಿಮೆಯಾಗತೊಡಗಿತ್ತು.

ಮನವಿ ಪತ್ರ ಸಲ್ಲಿಸಿ ತಿಂಗಳಾದರೂ ಆ ಪತ್ರಿಕೆಯ ಬಗ್ಗೆ ಯಾವ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಮತ್ತೇ ಆ ಸಂಪಾದಕ ಯಾವ ಅಡೆ-ತಡೆ ಇಲ್ಲದೇ ಅಸಭ್ಯ ಬರಹ ಪ್ರಕಟಿಸುವುದನ್ನು ಮುಂದುವರೆಸಿದ್ದಿತು. ಸಿ. ಎಫ್. ಟಿ. ಆರ್. ಐ. ನ ಸಿಬ್ಬಂದಿ ವರ್ಗ, ಅಧಿಕಾರಿ ವರ್ಗ ಎಲ್ಲರೂ ಮಹಿಳಾ ಉದ್ಯೋಗಿಗಳ ಹೋರಾಟಕ್ಕೆ ಸಂಪೂರ್ಣವಾಗಿ ಬೆಂಬಲ ಸೂಚಿಸಿದ್ದವು. ಜಿಲ್ಲಾಧಿಕಾರಿ ಹಾಗೂ ಪೋಲೀಸ್ ಸೂಪರಿನ್‌ಟೆನ್‌ಡೆಂಟ್ ಕೆಲವು ಮಾತುಗಳಿಂದ ಮಹಿಳೆಯರನ್ನೇ ಸಂತೈಸಲು ಪ್ರಯತ್ನಿಸಿದ್ದರು. 'ನಿರ್ಲಕ್ಷಿಸಿ ಬಿಡಿ', 'ನೀವೆಲ್ಲ ವಿವೇಚನೆ ಹೊಂದಿದ ಹೆಂಗಸರು', ಇತ್ಯಾದಿಗಳ ಮೂಲಕ ಸಮಾಧಾನಿಸಲು ಪ್ರಯತ್ನಿಸಿದರು. ಜೊತೆಗೆ ಈ ವಿಷಯದಲ್ಲಿ ತಾವು ಅಸಹಾಯಕರು ಎಂದು ಅವರು ಕೈ ಚೆಲ್ಲಿಬಿಟ್ಟರು. 'ಪತ್ರಿಕೋದ್ಯಮ ಸ್ವಾತಂತ್ರ್ಯ'! ಪ್ರಶ್ನಿಸಲಾಗದ ತಮ್ಮ ಅಸಹಾಯಕತೆಯನ್ನು ತೋರ್ಪಡಿಸಿದ್ದರು.

ಎಲ್ಲಾ ಮಹಿಳಾ ಉದ್ಯೋಗಿಗಳು ಈ ಬಗ್ಗೆ ಸ್ಪಷ್ಟವಾದ ಹೆಜ್ಜೆ ಇಡಲು, ಹೋರಾಡಲು ಸಿದ್ಧರಿದ್ದರು. ಒಟ್ಟಿಗೇ ಹೋರಾಟ ನಡೆಸಲು ತೀರ್ಮಾನಿಸಿದೆವು. ಹೀಗಾಗಿ ಮುಂದಿಟ್ಟ ಹೆಜ್ಜೆಯನ್ನು ಹಿಂದೆ ಹಾಕುವುದಿಲ್ಲವೆಂದು ಒಟ್ಟಾಗಿ ತೀರ್ಮಾನಿಸಿದೆವು. ಈ ತರಹೆಯ ಕೇಸು ಸುಮ್ಮನೇ ಮುಂದುವರಿದುಕೊಂಡು ಹೋಗುತ್ತಿದೆಯೇ ಹೊರತು ಫಲಿತಾಂಶ ಸಿಗುವುದಿಲ್ಲ. ಜಿಲ್ಲಾಧಿಕಾರಿಗಳು ತಮ್ಮ ಆಡಳಿತಾಧಿಕಾರಿಗಳೊಡನೆ ಚರ್ಚೆ ನಡೆಸಿದ ಮೇಲೆ ತಾವು ಮುಖ್ಯ ಮಂತ್ರಿಗಳಿಗೆ ಕಾಗದ ಬರೆದು ಈ ಬಗ್ಗೆ ಕ್ರಮ ಜರುಗಿಸಲು ತಮಗೆ ಪರವಾನಗಿ ನೀಡಬೇಕೆಂದು ಕಾಗದ ಬರೆಯುವುದಾಗಿ ಭರವಸೆ ಇತ್ತರು. ಈ ಹಂತದಲ್ಲಿ ಬಹುಮಂದಿ ಮಹಿಳೆಯರು ಕೋಪದಿಂದ ಸಿಡಿದೆದ್ದರು. ತಮಗೆ ಮೋಸವಾಗುತ್ತಿದೆ ಎಂದು ಬಲವಾಗಿ ಅವರಿಗೆ ಅನ್ನಿಸತೊಡಗಿತ್ತು. ಇದನ್ನು ಪ್ರತಿಭಟಿಸಿ ಮೆರವಣಿಗೆ ನಡೆಸುವುದಕ್ಕೆ ಕೆಲವರು ಸಿದ್ಧರಾದರು. ಆದರೆ ಕೊಳಕು ಪತ್ರಿಕೆಗೆ ಅನಾವಶ್ಯಕ ಪ್ರಚಾರ ಸಿಗುತ್ತದೆ ಎಂಬ ಕಾರಣಕ್ಕಾಗಿ ಹಿಂತಿರುಗಿದರು. ಜಿಲ್ಲಾಧಿಕಾರಿಗಳ ಮೇಲೆ ಒತ್ತಡ ತರುವುದಕ್ಕೋಸ್ಕರ ಮಹಿಳೆಯರೆಲ್ಲ ಒಟ್ಟಾಗಿ ಸಿ.ಎಫ್.ಟಿ.ಆರ್.ಐನ ವಿಜ್ಞಾನಿಗಳ ಸಂಘಟನೆ, ಸಮತಾ-ಮಹಿಳಾ ವೇದಿಕೆ, ನಾಗರಿಕ ಹಕ್ಕು-ಬಾಧ್ಯತೆಗಳ ಸಂಘಟನೆ, ದಲಿತ ಸಂಘರ್ಷ ಸಮಿತಿ ಈ ಸಂಘಟನೆಗಳನ್ನೆಲ್ಲಾ ಭೇಟಿಯಾದರು. ಈ ಎಲ್ಲಾ ಸಂಘಟನೆಗಳೂ ಈ ವಾರ ಪತ್ರಿಕೆಯನ್ನು ಕಟುವಾಗಿ ಟೀಕಿಸಿ ಈ ಬಗ್ಗೆ ಕ್ರಮಕ್ಕೆ ಒತ್ತಾಯಿಸಿ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರು. ಮತ್ತೆ ಜಿಲ್ಲಾಧಿಕಾರಿಗಳನ್ನು ಮಹಿಳಾ ಉದ್ಯೋಗಿಗಳು ಮತ್ತೆ ಭೇಟಿಯಾದಾಗ ಅವರು ಕ್ರಮ ತೆಗೆದುಕೊಳ್ಳುವ ಬಗ್ಗೆ ತಮಗಿರುವ ಅಸಹಾಯಕತೆಯನ್ನು ಮತ್ತೆ ವ್ಯಕ್ತಪಡಿಸಿದರು. ಅಷ್ಟೇ ಅಲ್ಲ, ಇಡಿಯ ಸಂದರ್ಭದಲ್ಲಿ ಇತರ ಅನೇಕ ಸಂಘಟನೆಗಳು ತಮ್ಮ ಮೇಲೆ ಒತ್ತಡ ಹೇರುತ್ತಿರುವುದರಿಂದ ತಮಗೆ ಹಿಂಸೆಯಾಗುತ್ತಿದೆ ಎಂಬುದನ್ನೂ ಅವರು ನುಡಿದರು. ಈ ವರ್ತನೆಯಿಂದ ಬೇಸರಗೊಂಡ ಮಹಿಳೆಯರು 1982ರ ನವೆಂಬರ್‌ನಲ್ಲಿ ಈ ರೀತಿಯ ಅಸಭ್ಯ ಬರಹಗಳ ಕುರಿತಾಗಿ 'ಪ್ರೆಸ್ ಕೌನ್ಸಿಲ್ ಆಫ್ ಇಂಡಿಯ'ಕ್ಕೆ ಒಂದು ಫಿರ್ಯಾದು ಬರೆದು ಕಳಿಸಿದರು.

ಇದರಿಂದ ಉಂಟಾದ ಪರಿಣಾಮಗಳು ಇನ್ನೂ ಘೋರ

ವಾಗಿದ್ದವು. 1982ರ ಡಿಸೆಂಬರ್‌ನಲ್ಲಿ 'ಪ್ರೆಸ್ ಕೌನ್ಸಿಲ್‌ಆಫ್ ಇಂಡಿಯ'– ಈ ವಾರ ಪತ್ರಿಕೆಯಿಂದ ಸಮುಜಾಯಿಷಿ ಕೇಳಿ ಪತ್ರ ಬರೆಯಿತು. ತಕ್ಷಣ ವಾರ ಪತ್ರಿಕೆಯು ವಕೀಲರ ಮೂಲಕ ಎಲ್ಲರಿಗೂ ಸೇರಿ ಒಂದು ನೋಟೀಸ್ ಕಳುಹಿಸಿದ್ದ. ತನ್ನ ಪತ್ರಿಕೆಯನ್ನು ಚೀಪ್ ಎಂದದ್ದಕ್ಕಾಗಿ 88 ಮಹಿಳೆಯರ ವಿರುಧ್ಧ ಮಾನನಷ್ಟ ಮೊಕದ್ದಮೆ ಹಾಕುವುದಾಗಿ ಪತ್ರಿಕೆ ಬೆದರಿಸಿತು. "88 dames after the editor" ಎಂಬ ಶೀರ್ಷಿಕೆಯ ಅಡಿ 'ಪ್ರೆಸ್ ಕೌನ್ಸಿಲ್ ಆಫ್ ಇಂಡಿಯಾ'ಕ್ಕೆ ಮಹಿಳಾ ಉದ್ಯೋಗಿಗಳು ನೀಡಿದ ಫಿರ್ಯಾದನ್ನೂ ಆ ಪತ್ರಿಕೆಯಲ್ಲಿ ಪ್ರಕಟಿಸಲಾಯಿತು. ಬಹಳಷ್ಟು ಮಹಿಳೆಯರು ಹೋರಾಡುವುದನ್ನು ಮುಂದುವರೆಸುವುದು ಒಳ್ಳೆಯದು ಎಂದು ಅಭಿಪ್ರಾಯಪಟ್ಟರು, ಕೆಲವರು ಈಗಾಗಲೇ ಜರ್ಝರಿತರಾಗಿದ್ದರು. ಮಧ್ಯಮ ವರ್ಗದ ಹೆಂಗಸರು ಅನೇಕಾನೇಕ ಸಮಸ್ಯೆಗಳ ನಡುವೆಯೇ ತಮ್ಮ ಉದ್ಯೋಗವನ್ನು ಆಯ್ಕೆ ಮಾಡಿಕೊಂಡಿರುತ್ತಾರೆ. ಮಾನನಷ್ಟ ಮೊಕದ್ದಮೆ—ಎಂದರೆ ಘಂಟೆಗಳು, ದಿನಗಳನ್ನು ನ್ಯಾಯಾಲಯದಲ್ಲಿ ಕಳೆಯಬೇಕು. ಇದು ಅವರಿಗೆ ಅವರ ಬದುಕಿನ ಚೌಕಟ್ಟಿಗೆ ಮೀರಿದ್ದಾಗಿತ್ತು. 1000/- ರೂಪಾಯಿ ಕೊಟ್ಟು ಪತ್ರಿಕೆಯ ಜೊತೆ ಒಪ್ಪಂದ ಮಾಡಿಕೊಂಡು ಬಿಡುವುದು. ಹಾಗೂ 'ಪ್ರೆಸ್ ಕೌನ್ಸಿಲ್ ಆಫ್ ಇಂಡಿಯ'ಕ್ಕೆ ಕೊಟ್ಟ ಫಿರ್ಯಾದು ವಾಪಸ್ಸು ಪಡೆದು ಬಿಡುವುದು ಎಂಬ ಸಲಹೆಗಳು ಬಂದವು. ಆದರೆ ಸಿ. ಎಫ್.ಟಿ.ಆರ್.ಐ.ನ ಅಧಿಕಾರಿಗಳು ಹೋರಾಟವನ್ನು ಮುಂದುವರಿಸುವಂತೆ ಪ್ರೋತ್ಸಾಹಿಸಿ ಸಹಕಾರ ನೀಡಿದರು. 'ಪ್ರೆಸ್ ಕೌನ್ಸಿಲ್ ಇಫ್ ಇಂಡಿಯ'ದ ವಿಚಾರವನ್ನು ಮುಂದುವರಿಸಿಕೊಂಡು ಹೋಗುವಂತೆ ಸಲಹೆ ಇತ್ತರು. 'ಜೊತೆಗೆ ಉತ್ತಮ ನ್ಯಾಯವಾದಿಯೊಬ್ಬರು ಕೂಡಾ ಇದೇ ಸರಿಯೆಂದೂ, ಹಿಂದಕ್ಕೆ ಹೆಜ್ಜೆ ಇಡುವುದು ಸರಿಯಲ್ಲವೆಂದೂ ಅಭಿಪ್ರಾಯಪಟ್ಟರು. ಹೋರಾಟ ಮುಂದುವರೆಸಲು ಮತ್ತೆ ಮಹಿಳಾ ಉದ್ಯೋಗಿಗಳು ಒಟ್ಟಾಗಿ ನಿರ್ಧರಿಸಿದರು. 'ಪ್ರೆಸ್ ಕೌನ್ಸಿಲ್ ಆಫ್ ಇಂಡಿಯಾ'ಕ್ಕೆ ಮತ್ತೆ ಪತ್ರಿಕೆ ವಿರುದ್ಧ ಫಿರ್ಯಾದು ನೀಡಿದರು.

'1983ರ ಅಕ್ಟೋಬರ್‌ನಲ್ಲಿ ಈ ಬಗ್ಗೆಗಿನ ತನಿಖೆಗಳೆಲ್ಲ ಮುಗಿದ ಮೇಲೆ 'ಪ್ರೆಸ್ ಕೌನ್ಸಿಲ್ ಆಫ್ ಇಂಡಿಯ' ವಾರ ಪತ್ರಿಕೆಯ ಸಂಪಾದಕ ಹಾಗೂ ಮಹಿಳಾ ಪ್ರತಿನಿಧಿಗಳು ಹೇಳಿಕೆ ನೀಡಲು ದೆಹಲಿಗೆ ಬರಬೇಕೆಂದು ಆದೇಶ ನೀಡಿತು. ಸಿ.ಎಫ್.ಟಿ.ಆರ್.ಐ.ನ ಸಿಬ್ಬಂದಿ ವರ್ಗ ಒಟ್ಟಾಗಿ ಈ ಪ್ರಯಾಣಕ್ಕೆ ತಗಲುವ ವೆಚ್ಚವನ್ನು ಒಟ್ಟುಗೂಡಿಸಿದರು. ಇಬ್ಬರು ಮಹಿಳಾ ಪ್ರತಿನಿಧಿಗಳು ದೆಹಲಿಯಲ್ಲಿ ಈ ಕೇಸನ್ನು ಪ್ರತಿನಿಧಿಸಿದರು. 'ಪ್ರೆಸ್ ಕೌನ್ಸಿಲ್ ಆಫ್ ಇಂಡಿಯ' ವಿಚಾರಣೆ ನ್ಯಾಯಯುತವಾಗಿತ್ತು. ಕೊನೆಗೂ ಮಹಿಳಾ ಉದ್ಯೋಗಿಗಳು ಕಾದಿದ್ದ ನಿರ್ಣಯ ಪ್ರಕಟಿಸಲ್ಪಟ್ಟಿತು. ಈ ರೀತಿಯ ಅಸಭ್ಯ, ಅಶ್ಲೀಲ ವಿಷಯಗಳನ್ನು ಬರೆಯುವ/ಪ್ರಕಟಿಸುವುದರ ಮೇಲೆ ಪ್ರೆಸ್ ಕೌನ್ಸಿಲ್ ಆಫ್ ಇಂಡಿಯ' ನಿಷೇಧ ಹೇರಿತು.

ಈ ಹೋರಾಟದಲ್ಲಿ ನಾವು ಮಹಿಳೆಯರು ಗಳಿಸಿದ ಧೈರ್ಯ ಅಪಾರವಾದುದು. ಈ ಸಂದರ್ಭದಲ್ಲಿ ಸಿದ್ಧ ಬಲವಾದ ಒಂದು ಸಂಘಟನೆ ಇರಲಿಲ್ಲ. ಸಾಮಾನ್ಯವಾಗಿದ್ದ ಒಂದು ಸಮಸ್ಯೆ, ಒಟ್ಟಾಗಿ ಹೋರಾಡಿದರೆ ಒಬ್ಬರಿಗೊಬ್ಬರು ಸಹಾಯಕರಾಗಿ ನಿಲ್ಲಬಹುದೆಂಬ ಭಾವನೆ ನಮ್ಮೆಲ್ಲರನ್ನೂ ಒಟ್ಟಾಗಿಸಿತ್ತು, ಒಂದು ಸಂಘಟನೆ ಸಾಧ್ಯವಾಗಿತ್ತು. ಅಪರಿಚಿತ ಪತ್ರಗಳು, ಅಲ್ಲಸಲ್ಲದ ಮಾತುಗಳು ನಮ್ಮ ಧೈರ್ಯವನ್ನು ಕುಗ್ಗಿಸಿರಲಿಲ್ಲ. ಒಗ್ಗಟ್ಟಿನಲ್ಲಿ ಬಲವಿದೆ ಎಂಬ ಭಾವನೆ ನಮ್ಮಲ್ಲಿ ಒಡಮೂಡಿತ್ತು. ಈ ಹೋರಾಟ ಒಂದು-ಒಂದೂವರೆ ವರ್ಷಕ್ಕೆ ಎಲ್ಲ ಮುಂದುವರೆದಾಗ್ಯೂ ಕೂಡಾ ನಮ್ಮಲ್ಲಿ ಒಗ್ಗಟ್ಟಿತ್ತು. ಈ ರೀತಿಯ ಸಾಮಾಜಿಕ ಅನ್ಯಾಯವನ್ನು ನಾವು ಮೌನವಾಗಿ ಸಹಿಸಹಿಸುವ ಅಗತ್ಯವೇನೂ ಇಲ್ಲ.

Women united shall not be defeated
Women divided can always be defeated!

# ಗ್ರಾಮೀಣ ಶಾಲೆಗಳಲ್ಲಿ ಇಳಿಮುಖವಾಗುತ್ತಿರುವ ಹೆಣ್ಣುಮಕ್ಕಳ ಸಂಖ್ಯೆ

ಭಾರತದ ಹಳ್ಳಿಗಳಲ್ಲಿ, ಪ್ರತಿವರ್ಷ 1ನೇ ತರಗತಿಗೆ ಸೇರವ ಪ್ರತಿ 100 ಹೆಣ್ಣುಮಕ್ಕಳ ಸಂಖ್ಯೆ 5ನೇ ತರಗತಿಗೆ 40ಕ್ಕೆ ಇಳಿಯುತ್ತದೆ. 8ನೇ ತರಗತಿಯ ವೇಳೆಗೆ ಆ ಸಂಖ್ಯೆ 18 ಆದರೆ 12 ತರಗತಿಗೆ ಮೊದಲು ತರಗತಿಯ ಶೇ. 1 ರಷ್ಟಾಗುತ್ತದೆ.

ಹೆಣ್ಣುಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ಶಾಲೆಗೆ ಸೇರುತ್ತಿದ್ದಾರೆಂಬುದು ಸಮಾಧಾನಕರವಾದ ವಿಷಯವಾದರೂ ಶಾಲೆಬಿಡುವ ಸಂಖ್ಯೆಯು ಹೆಚ್ಚುತ್ತಿರುವುದು, ಸಮಾಧಾನವನ್ನು ತೊಡೆದುಹಾಕುತ್ತದೆ. 1963 ರಿಂದ 1986 ರವರೆಗೆ ಶಾಲೆ ಸೇರುವ ಹೆಣ್ಣುಮಕ್ಕಳ ಸಂಖ್ಯೆ ಎರಡರಷ್ಟಾಗಿದ್ದರೂ, 6 ರಿಂದ 11 ರವರೆಗಿನ ವಯಸ್ಸಿನ ಶೇ. 40 ರಷ್ಟು ಗ್ರಾಮೀಣ ಹೆಣ್ಣುಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಗ್ರಾಮೀಣ ಹುಡುಗರ ಸಂಖ್ಯೆ ಶೇ. 17 ಆದರೆ, ಆ ವಯಸ್ಸಿನ ಶಾಲೆ ಸೇರುವ ಹೆಣ್ಣುಮಕ್ಕಳ ಸಂಖ್ಯೆ ನಗರದಲ್ಲಿ ಶೇ. 76

1986 ರ ರಾಷ್ಟ್ರೀಯ ಶಿಕ್ಷಣ ನೀತಿಯು ಶಾಲೆಗೆ ಸೇರುವುದಲ್ಲದೆ, ಶಾಲೆಯಲ್ಲಿ ಉಳಿದುಕೊಳ್ಳುವುದಕ್ಕೆ ಹಾಗೂ ಮಕ್ಕಳ ಸಾಧನೆಗೆ ಹೆಚ್ಚು ಒತ್ತು ನೀಡಿತು. ಇದು ಮಕ್ಕಳನ್ನು ಕೇಂದ್ರವಾಗಿಟ್ಟುಕೊಂಡ ಕಲ್ಕಿ ಉತ್ತಮ ಶಾಲಾ ವಾತಾವರಣಕ್ಕೆ ಬೇಕಾದ ಅವಶ್ಯಕತೆಗಳ ಏರ್ಪಾಡು ಹಾಗು ಆಡಳಿತ ವಿಕೇಂದ್ರೀಕರಣದ ಮೂಲಕ ಸಾಧ್ಯವೆಂದು ತಿಳಿಸಿತು. ಈ ನಿಟ್ಟಿನಲ್ಲಿ ಹಮ್ಮಿಕೊಂಡು ಕಾರ್ಯಕ್ರಮಗಳು, ಹೆಣ್ಣುಮಕ್ಕಳ ಶಿಕ್ಷಣ ವಿರೋಧಿಸುವ ಪ್ರತಿಕೂಲ ಸಂಗತಿಗಳಿಂದಾಗಿ ನಿಷ್ಫಲಗೊಂಡವು.

ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಹಾಗೂ ತರಬೇತು ಮಂಡಳಿ ಹಾಗು ಮಹಿಳಾ ಅಧ್ಯಯನ ವಿಭಾಗದ ಡಾ॥ ಉಷಾ ಅವರು ನಡೆಸಿದ ವಿಸ್ತಾರವಾದ ಅಧ್ಯಯನವು ಹೆಣ್ಣುಮಕ್ಕಳು ಶಾಲೆ ಸೇರುವ, ನಡುವೆ ಬಿಡುವ ಹಾಗು ಕುಂಠಿತವಾಗಿರುವ ಗ್ರಾಮೀಣ ಅಭಿವೃದ್ಧಿಗೂ ಇರುವ ಪ್ರಭಲವಾದ ಸಂಬಂಧವನ್ನು ಗುರುತಿಸಿತು. ನೀರು, ಉರುವಲು, ಮೇವುಗಳ ಸರಬರಾಜು ಮಾಡಲು ಸರ್ಕಾರ ವಿಫಲಗೊಂಡಿರುವುದು ಹಾಗು ಮಕ್ಕಳ ಆರೈಕೆಯ ಅನುಕೂಲಗಳು ಇಲ್ಲದಿರುವುದು, ಹೆಣ್ಣು ಮಕ್ಕಳು ಶಾಲೆ ಬಿಡುವುದು ಕಾರಣವಾಗಿದೆ. ಆರೋಗ್ಯ ಸಣ್ಣ ಮಕ್ಕಳನ್ನು ನೋಡಿಕೊಳ್ಳುವ ಹೊರೆಯಿಂದಾಗಿ ಹೆಣ್ಣು ಮಕ್ಕಳು ಶಾಲೆಗೆ ಬರಲು ಸಮಯವಿರುವುದಿಲ್ಲ.

ರಾಮಮೂರ್ತಿ ಆಯೋಗವು, ಬಾಲ್ಯ ಆರೈಕೆ ಹಾಗು ಶಿಕ್ಷಣ ಕೇಂದ್ರಗಳು ಪ್ರಾಥಮಿಕ ಶಾಲೆಗೆ ಹತ್ತಿರವಾಗಿದ್ದು, ಕಾರ್ಯವೇಳೆಯೂ ಅದಕ್ಕೆ ತಕ್ಕುದಾಗಿರಬೇಕೆಂದು ಸೂಚಿಸಿದೆ. ಇದರಿಂದಾಗಿ ಸಣ್ಣ ಮಕ್ಕಳನ್ನು ನೋಡಿಕೊಳ್ಳುವ ಹೊರೆಯು ತಪ್ಪಿ ಹೆಣ್ಣುಮಕ್ಕಳು ಶಾಲೆಗೆ ಬರುವಂತಾಗುವುದೆಂದು ಆಯೋಗವು ತಿಳಿಸಿದೆ.

ಈ ಸಂದರ್ಭದಲ್ಲಿಯೂ ಸಹ ಹತ್ತಿರ ಶೇ. 20 ರಷ್ಟು ಗ್ರಾಮೀಣ ಜನಸಂಖ್ಯೆಯೂ ಪ್ರಾಥಮಿಕ ಶಾಲೆಗೆ ಬರುವುದು ಸಾಧ್ಯವಿಲ್ಲ. ಕೆಲಸದ ಹೊರೆ ಹೊತ್ತ ಹೆಣ್ಣುಮಕ್ಕಳಿಗೆ 1 ಕಿ. ಮೀ ದೂರವೂ ಹೆಚ್ಚೆನಿಸುತ್ತದೆ. ಆಯೋಗವು ಕನಿಷ್ಟ 300 ಜನಸಂಖ್ಯೆ ಪ್ರದೇಶದಲ್ಲೂ ಪ್ರಾಥಮಿಕ ಶಾಲೆ ಇರಬೇಕೆಂದು ಸೂಚಿಸಿದೆ. ಅಂದರೆ ಇನ್ನೂ 1.22 ಲಕ್ಷ ಹೆಚ್ಚು ಶಾಲೆಗಳ ಅವಶ್ಯಕತೆಯಿದೆ. ಬೇಕಾಗುವ ಸಂಪನ್ಮೂಲಗಳ ಇಲ್ಲದಿರುವುದು ದೊಡ್ಡ ತಡೆಯಾಗಿದೆ. ಒಟ್ಟು ಶಿಕ್ಷಣದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಆಗುವ ಖರ್ಚು 1950-80 ರಲ್ಲಿ ಶೇ 40 ರಿಂದ ಶೇ 20 ಕ್ಕೆ ಇಳಿದಿದೆ.

ಶಾಲೆಗೆ ಸೇರುವ ಸಂಖ್ಯೆಗಿಂತ ಬಿಡುವವರ ಸಂಖ್ಯೆಯೇ ಹೆಚ್ಚಾಗಿರುವುದಕ್ಕೆ ಮೇಲಿನ ಸಂಗತಿಗಳೇ ಸಂಪೂರ್ಣವಾಗಿ ಕಾರಣವೆಂದು ಹೇಳಲಾಗುವುದಿಲ್ಲ. ಶಾಲೆಗಳೂ ಅಲ್ಲದೆ ಅಧ್ಯಾಪಕರುಗಳು. ಪಠ್ಯಕ್ರಮಗಳು ಕಾರಣವಾಗಿವೆ. ಡಾ॥ ನಾಯರ್ ಅವರು "ಯಾವ ಕಾರಣದಿಂದಲೇ ಆಗಲಿ ಪೋಷಕರು ಮಕ್ಕಳನ್ನು ಶಾಲೆಗೆ ಕಳಿಸಿದರೆ, ಮಕ್ಕಳನ್ನು ಉಳಿಸಿಕೊಳ್ಳಲು ನಮ್ಮಿಂದ ಸಾಧ್ಯವಾಗಿಲ್ಲ" ಎಂದು ಹೇಳಿದ್ದಾರೆ. ಮಹಿಳಾ ಸಾಕ್ಷರತೆ ಅತೀ ಕಡಿಮೆ ಇರುವುದು ಮಹಿಳಾ ಅಧ್ಯಾಪಕರ ಕಡಿಮೆ ಸಂಖ್ಯೆಗೆ ಕಾರಣವಾಗಿದೆ. ಮಹಿಳಾ ಅಧ್ಯಾಪಕರ ಕಡಿಮೆ

ಸಂಖ್ಯೆಯೂ ಶಾಲೆ ಸೇರುವ, ಬಿಡುವ ಸಂಖ್ಯೆಗೆ ಮುಖ್ಯ ಕಾರಣವಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಕೇವಲ ಶೇ 21ರಷ್ಟು ಪ್ರಾಥಮಿಕ ಶಾಲಾ ಅಧ್ಯಾಪಕರು, ಶೇ 23 ರಷ್ಟು ಮಾಧ್ಯಮಿಕ ಶಾಲಾ ಅಧ್ಯಾಪಕರಷ್ಟೇ ಮಹಿಳೆಯರು. ಡಾ॥ ನಾಯರ್ ಅಭಿಪ್ರಾಯಪಡುವಂತೆ ಶಾಲೆಗೆ ಸೇರುವ, ಬಿಡುವ ಕಾರಣಗಳು ಹಣ ಹಾಗು ಸೌಲಭ್ಯಗಳಿಗೂ ಮೀರಿದ್ದು, ಅತಿ ಕಡಿಮೆ ಮಹಿಳಾ ಸಾಕ್ಷರತೆ ಹೊಂದಿರುವ ಗ್ರಾಮೀಣ ಸಾಮಾಜಿಕ ವ್ಯವಸ್ಥೆ ಹಾಗು ಕೆಳಮಟ್ಟದ ಇರುವ ಮಹಿಳಾ ಸ್ಥಾನಮಾನ ಇವು ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಗಣನೆಯೇ ಇಲ್ಲದಿರುವುದಕ್ಕೆ ಕಾರಣವಾಗಿದೆ. ಶಿಕ್ಷಣವಲ್ಲದೆ ಇನ್ನಿತರ ಅಂಶಗಳಾದ ಆಹಾರ, ಆರೋಗ್ಯ-ಆರೈಕೆ, ವಿರಾಮದಂತ ವಿಷಯಗಳಲ್ಲಿ ಹೆಣ್ಣುಮಕ್ಕಳನ್ನು ಕಡೆಗಣಿಸಲಾಗುತ್ತಿದೆ. ಸಣ್ಣ ವಯಸ್ಸಿನಲ್ಲೇ ಮದುವೆಯಾಗುವುದು ಹೆಣ್ಣು ಮಕ್ಕಳ ಶಿಕ್ಷಣದ ಮೇಲೆ ಪರಿಣಾಮ ಬೀರುತ್ತದೆ.

ಈ ನಿಟ್ಟಿನಲ್ಲಿ ಡಾ॥ ನಾಯರ್ ಅವರು ಹೆಣ್ಣು ಮಕ್ಕಳ ಶಿಕ್ಷಣ ಕುರಿತ ನೀತಿಯನ್ನು ಆಪಾದಿಸಿದ್ದಾರೆ. ಶಿಕ್ಷಣ ನೀತಿಯೂ ದೀರ್ಘಕಾಲದಿಂದ ಕೌಟುಂಬಿಕ ಆರ್ಥಿಕತೆಯ Syudromeನಿಂದ ನರಳುತ್ತಿವೆ. ಮಹಿಳೆ ಬರಿ ತಾಯ್ತನ, ಶೈಕ್ಷಣಿಕ ಯೋಜನೆಯೂ ಗೃಹಿಣೀತ್ವಕ್ಕಷ್ಟೆ ಸೀಮಿತವೆನ್ನುವ ಮಧ್ಯಮ ವರ್ಗದ ಲಘುದೃಷ್ಟಿಯನ್ನೆ 6ನೇ ಪಂಚವಾರ್ಷಿಕ ಯೋಜನೆಯವರೆಗೆ ಪರಿಗಣಿಸುತ್ತಾ ಬಂದಿದೆ. ಸ್ವಸಾಮರ್ಥ್ಯ ಹೊಂದಲು ದುಡಿವ ಮಹಿಳೆಯ ಆದಾಯವನ್ನು ಏರಿಸುವುದಕ್ಕೆ ಯಾವ ಆದ್ಯತೆಯನ್ನು ನೀಡಿಲ್ಲ. ಗ್ರಾಮೀಣ ಸಾಮಾಜಿಕ ವ್ಯವಸ್ಥೆಯನ್ನು ಗ್ರಹಿಸುವಲ್ಲಿ ಯೋಜನೆಯೂ ವಿಫಲಗೊಂಡಿದೆ. ಗ್ರಾಮೀಣ ಸಮಾಜದ ಬಡತನ, ಜನಸಂಖ್ಯಾ ಲಕ್ಷಣಗಳು (demographic) ಸ್ಥಳೀಯ ಸಂಪನ್ಮೂಲ ಹಾಗು ಅವಶ್ಯಕತೆಗಳಿಗೆ ಕಾರಣವಾಗುತ್ತವೆ.

ಕೃಪೆ : **ಟೈಂಸ್ ಆಫ್ ಇಂಡಿಯಾ**

---

## ನೆನಪುಗಳೇ

**ಮನಿಕಾ**

ಮನದ ತುಂಬಾ ಚಿಂತೆ
ಯಾರಿಗೇಳಲಿ ನನ್ನ ವೇದನೆ
ಹೃದಯದ ಮೂಲೆಯಲ್ಲಿಡಗಿದ
ಓ ನೆನಪುಗಳೇ, ಹೊರಚಿಮ್ಮಿದಿರೇಕೆ
ನನ್ನ ಕಾಡುತ್ತಿರುವಿರೇಕೆ

ಅಸ್ಪಷ್ಟವಾಗುತ್ತಿದ್ದ ನೆನಪುಗಳಿಗೆ
ರೂಪು ಕೊಟ್ಟವರಾರು, ಓ ಮನಸ್ಸೇ,
ತಿಳಿದಿದೆಯೇ ನಿನಗೆ
ಕತ್ತಲಲ್ಲಿ ನಿಂತಿರುವೆನು
ಬೆಳಕೆಲ್ಲು ಕಾಣುತ್ತಿಲ್ಲ.
ಸೂರ್ಯನುದಿಸಿದರು ಎಲ್ಲೆಲ್ಲು ಕತ್ತಲು

ನನ್ನೊಳಗೆ ಕರಗುತ್ತಿದ್ದ,
ಮರೆಯಲೆತ್ನಿಸುತ್ತಿದ್ದ ನೆನಪುಗಳೆ,
ಏಕೇಕೆ ಹೊರಚಿಮ್ಮಿದಿರಿ
ದೂರ ಹೋಗಿರಿ ಹೀಗೆ ನನ್ನ
ಹೃದಯವ ದಹಿಸದಿರಿ.
ನೋವ ನೀಡದಿರಿ ಎನಗೆ,

ನೆನಪೇ, ದೂರ ಸರಿ ನೀ
ಮರೆಯಾಗು ಮತ್ತೆ, ನನ್ನೆದೆಗೆ
ಶಾಂತಿ ನೀಡು ನೆನಪುಗಳೇ
ಶಾಂತಿ ನೀಡಿರಿ.

# ಕಲಿಯುವ ಕನಸು

ಉತ್ತನೂರು ರಾಜಮ್ಮ ವಿ. ಶೆಟ್ಟಿ

ಎಮ್ಮೆ ಮೇಯಿಸುವಾಗ ಹುಲ್ಲುಬೀದಿನ ಮಧ್ಯೆ ಕನಸೊಂದ ಕಂಡಿದ್ದೆ
ಉಪ್ಪಚಿ ಪೊದೆಯೊಳಗೆ ಹಾವುರಾಣಿಯು ಸದ್ದು
ಭಯಗೊಂಡು ಹೊಡೆದಿದ್ದೆ ಗಬ್ಬದೆಮ್ಮೆಯ ಬೆನ್ನಿಗೆ
ಬಾಲ ಜಾಡಿಸಿದಾಗ ಗಂಜಲಾ ನೀರೆರೆಚಿ ಕೆನ್ನೆ ಹಸಿಯಾಯಿತೆ ?

ಅಯ್ನೋರ ಮನೆಹೆಣ್ಣು ಸೊಗಸು ತುಂಬಿದ ಸೀರೆ
ತೆಳು ಕಟುಸದೊಳಗಂತೂ ಮಸರು ಕನ್ನಡಿಯು ಚಿತ್ತಾರ
ಪೇಂಟು ಇಸ್ತ್ರಿಯ ಸರಟು ತೊಟ್ಟಿದ್ದ ಅವಳ ಗಂಡ
ಗಡಿಯಾರ ಕೈತಿರುವಿ ಹೆಂಡ್ತಿಯ ಕಣ್ಣೆಡೆಗೆ ಅವನ ಚೆಲ್ಲುನೋಟ

ಇಬ್ಬರೊಳಗಿನ ಸೆಣಸು ಕೈಚೀಲ ಚೆಲ್ಲಿದವು
ಬಣ್ಣ ಬಣ್ಣನೆಯ ಸಿನಿಮಾದ ಪುಸ್ತಕದ ಹಾಳೆಗಳು
ಎಂತೆಂತ ಮೊಗಗಳು ಸಣ್ಣಮಲ್ಲಿಗೆ ಹಾರ ಮುಡಿದ ತುರುಬು
ಸಿಗ್ಗು ವಾಲಿಸುವ ಅಪ್ಪುಗೆಯ ಜೋಡಿಗಳು ಹಾಳೆತುಂಬಾ

ಗಂಡಹೆಂಡಿರ ಪೈಪೋಟಿ ಓದಿನೋಡುವ ಆತುರ
ಕಣ್ಣು ಕೀಳದೆ ಉಳಿದ ರಂಗು ನೋಟದ ಪುಟಗಳು
ಕೆಂಪು ಬಣ್ಣದ ಬಸ್ಸು ಏರಿ ಕುಳಿತರೂ ಕೂಡ
ಅಕ್ಷರದ ಗೆರೆಗಳಲಿ ಕಣ್ಣು ಕುಳಿತವು ಎಂತ ಕತೆಯೋ?

ಮನಸು ನಾಟಿದ ಕತೆಯ ತಿರುಳು ಹೇಳಿತು ಮುಗುಳು
ನನ್ನ ಕತೆ ನಾ ಓದಿದಂತೆ ಕನಸನ್ನೇ ಕಂಡೆ
ಅಕ್ಷರವ ಕಲಿಯಲೇ ಕತೆಯೊಂದ ಬರಿಯಲೇ
ನನ್ನ ಕನಸಿನ ಕತೆಯ ಬರೆದು ಹಾಡಲೇ....

---

**ಸ್ತ್ರೀವಾದಿ ವಿಮರ್ಶೆ ಬರಿ ಪಾತ್ರಗಳ ಅಧ್ಯಯನಕ್ಕೆ ಸೀಮಿತಗೊಂಡರೆ ಸಾಲದು ಎಂಬುದನ್ನು ಅದರ ಪ್ರತಿಪಾದಕರು ಅರಿಯದೇ ಇರಲಿಲ್ಲ. ಅದಕ್ಕೆ ಒಂದು ಭದ್ರವಾದ ಸ್ಥಾನವು ಸಿಕ್ಕಬೇಕಾದರೆ, ಅದೊಂದು ಸೈದ್ಧಾಂತಿಕ ನೆಲೆಗಟ್ಟನ್ನು ಹೊಂದಬೇಕು.**

**ಡಾ॥ ಸರೋಜಿನಿ ಸಿಂತ್ರಿ**

---

# ಚೀನಾದಲ್ಲಿ ಹೆಚ್ಚುತ್ತಿರುವ ಭ್ರೂಣಹತ್ಯೆ

1990 ರಲ್ಲಿ, ಚೀನಾದಲ್ಲಿ ಊಹೆಗೂ ಮೀರಿದ ಪರಿಣಾಮ ಬೀರಿದ ಆಧುನಿಕ ಯಂತ್ರವೆಂದರೆ ಅಲ್ಟ್ರಾ ಸೌಂಡ್ ಸ್ಕ್ಯಾನರ್. ಈ ಯಂತ್ರದಿಂದ ಭ್ರೂಣದ ಲಿಂಗ ಪತ್ತೆಯಾಗುವುದರಿಂದ ಹಾಗೂ ಆ ನಂತರದ ಗರ್ಭಪಾತ ಗಳಿಂದಾಗಿ, ಚೀನಾದಲ್ಲಿ ಲಿಂಗ ಪ್ರಮಾಣವು ಬಹಳಷ್ಟು ಏರುಪೇರಾಗಿದೆ. ಕಳೆದ ವರ್ಷ ನಡೆಸಿದ ನವಜಾತು ಶಿಶು ಗಳು ಲಿಂಗ ಪ್ರಮಾಣದ ಪ್ರಕಾರ 118.5 ಗಂಡು ಮಕ್ಕಳಿಗೆ 100 ಹೆಣ್ಣು ಮಕ್ಕಳಿದ್ದಾರೆ. ಸೆಪ್ಟಂಬರ್ ಹಾಗೂ ಅಕ್ಟೋಬರ್‌ನಲ್ಲಿ 3,85000 ಜನರ ಸರ್ವೆ ಮಾಡಿದಾಗ ಈ ಅಂಕಿ-ಅಂಶ ತಿಳಿದು ಬಂದಿದೆ. ವಿಷಯ ತಿಳಿದು ಗಾಬರಿಯಾದ ಅಧಿಕಾರಿಗಳು, ಅಂಕಿ-ಅಂಶವನ್ನು ಗೌಪ್ಯವಾಗಿಡಲು ಸೂಚಿಸಿದರು. ಸಾಮಾನ್ಯವಾಗಿ ಎಲ್ಲಾ ಜನಾಂಗದ ಹೆಂಗಸರು 100 ಹೆಣ್ಣು ಶಿಶುಗಳಿಗೆ 105 ಅಥವಾ 106 ಗಂಡು ಶಿಶುಗಳನ್ನು ಹೆರುತ್ತಾರೆ. ಅಂದರೆ, ಕಳೆದವರ್ಷದ ಲಿಂಗ ಪ್ರಮಾಣವನ್ನು ಗಮನಿಸಿ ದರೆ ಚೀನಾದಲ್ಲಿ ಶೇ 12 ಕ್ಕೂ ಹೆಚ್ಚು ಹೆಣ್ಣು ಭ್ರೂಣ ಗಳ ಗರ್ಭಪಾತವಾಗಿದೆ ಅಥವಾ ಲೆಕ್ಕಕ್ಕೆ ಸಿಕ್ಕಿಲ್ಲ. ಅತಿ ಹೆಚ್ಚಿನ ಜನಸಂಖ್ಯೆಯು 1.17 ಬಿಲಿಯನ್ ಇರುವ ಚೀನಾದಲ್ಲಿ, ಪ್ರತಿವರ್ಷ 1.7 ಬಿಲಿಯನ್ ಹೆಣ್ಣು ಮಕ್ಕಳ ನಾಶವಾಗುತ್ತಿದೆ.

ಅಲ್ಲಿನ ಒಂದು ಪತ್ರಿಕೆ 'ಪಬ್ಲಿಕ್ ಸೆಕ್ಯೂರಿಟನ್ಯೂಸ್' ಅಲ್ಟ್ರಾಸೌಂಡ್ ಒಂದು ಪರಮಾಣು ತಂತ್ರಜ್ಞಾನದಂತೆ, ಸಮಾಜಕ್ಕೆ ಅದೊಂದು ಅದ್ಭುತ ವಸ್ತು ಆದರೆ ಅದು ದೊಡ್ಡ ದುರಂತಗಳಿಗೂ ಕಾರಣವಾಗಿವೆ ಎಂದು ವರದಿ ಮಾಡಿದೆ. ಲಿಂಗ ಪ್ರಮಾಣದ ಏರುಪೇರಿನಿಂದಾಗುವ ಆಪತ್ತನ್ನು ಊಹಿಸಿ ಜನರಿಗೆ ಎಚ್ಚರಿಕೆ ನೀಡಲು ಪ್ರಾರಂಭಿಸಿದ್ದಾರೆ. ಲಿಂಗ ಪ್ರಮಾಣವು ಇದೇ ರೀತಿ ಮುಂದುವರೆದರೆ, ಈಗಿನ ಹುಡುಗರಿಗೆ, ಇನ್ನು ಇಪ್ಪತ್ತು ವರ್ಷಗಳಲ್ಲಿ ಮದುವೆಯಾಗಲು ಹುಡುಗಿಯರೆ ಸಿಗದಂತಾ ಗುವುದೆಂದು ತಿಳಿಸಿದೆ. ಹೆಚ್ಚುತ್ತಿರುವ ಗಂಡಸರ ಸಂಖ್ಯೆ ಯಿಂದ ಯಾವರೀತಿಯ ಸಮಾಜಿಕ ಪರಿಣಾಮ ಉಂಟಾಗ ಬಹುದೆಂದು ಯಾರು ಊಹಿಸಿಲ್ಲ.

ಪೂಜಿಯಾನ್, ಸಿಜುಯಾನ್, ಹೊವೆ ಈ ಮೂರು ಪ್ರಾಂತ್ಯಗಳಲ್ಲಿನ ಕೆಲವು ರೈತರನ್ನು ಮಾತನಾಡಿಸಿದಾಗ, ಅವರಾರಿಗೂ ತಮ್ಮ ಗಂಡುಮಕ್ಕಳು ಮದುವೆ ಸಾಧ್ಯತೆಯು ಬಗ್ಗ ಕಾಳಜಿ ಇಲ್ಲವೆಂದು ತಿಳಿದು ಬಂದಿದೆ. ಬದಲಿಗೆ ಬರಿ ಗಂಡು ಮಕ್ಕಳೇ ಬೇಕೆನ್ನುವ ಭ್ರಮೆಯಲ್ಲಿ ದ್ದಾರೆ. ಗಂಡು ಮೊಮ್ಮಕ್ಕಳು ಮುಖ್ಯವಾದರು ಅವರ ಮೊದಲ ಆದ್ಯತೆ ಅವರಿಗೆ ಗಂಡು ಮಕ್ಕಳು ಬೇಕೆನ್ನು ವುದು. ಗಂಡು ಮಕ್ಕಳು ಬೇಕೆನ್ನುವ ಸಂಪ್ರದಾಯ ದಿಂದಾಗಿ ಹಿಂದೆ, ಹೆಣ್ಣು ಭ್ರೂಣದ ಹತ್ಯೆಯಾಗುತ್ತಿತ್ತು. ಅದೂ 'ಬರ' ದಂತಹ ಸಮಯದಲ್ಲಿ. ಹೆಚ್ಚು ವಿರಳ ವಾಗಿದ್ದ ಹೆಣ್ಣು ಭ್ರೂಣಹತ್ಯೆಯು ಇತ್ತೀಚಿನ 15 ವರ್ಷಗಳಲ್ಲಿ ಹೆಚ್ಚಾಗಿದೆ. ಎರಡು ಪ್ರಮುಖ ಬದಲಾವಣೆ ಗಳು ಹೆಚ್ಚಳಕ್ಕೆ ಕಾರಣವಾಗಿದೆ. 1990ರ ಕೊನೆಯಲ್ಲಿ ಜಾರಿಗೆ ಬಂದ ಕಡ್ಡಾಯ ಸಂತಾನ ನಿಯಂತ್ರಣ ನಿಯಮ ಗಳು. ಈ ನಿಯಮದ ಪ್ರಕಾರ ಗಂಡ-ಹೆಂಡತಿ 1 ಅಥವಾ 2 ಮಕ್ಕಳನ್ನಷ್ಟೆ ಪಡೆಯಬೇಕು. ಇದರಿಂದ ತಂದೆತಾಯಿಗಳು ತಮ್ಮ ಪಾಲನ್ನು ಹೆಣ್ಣುಮಕ್ಕಳಿಗೆ ವ್ಯರ್ಥ ಮಾಡಿಕೊಳ್ಳಲು ಹೆದರುತ್ತಾರೆ. ಅನಧಿಕೃತ ಗರ್ಭಧಾರಣೆಯ ಬಗ್ಗೆ. ಅಧಿಕಾರಿಗಳು ಕಠಿಣ ಕ್ರಮ ಕೈಗೊಂಡಿರುವುದು ಭಯಕ್ಕೆ ಕಾರಣವಾಗಿದೆ.

---

ಓದಿ

'ಅನಿಕೇತನ'

**ಸಂಪುಟ. 5 ಸಂಚಿಕೆ 3.**

**'ಸ್ತ್ರೀ ಸಾಹಿತ್ಯ' ಮತ್ತು ಸ್ತ್ರೀವಾದಿ ಚಿಂತನೆಗಳ ವಿಶೇಷಾಂಕ**

---

ಸುಶೀಲಾ ವಿ. ಬಾಳಿಗಾ

ನೀ ರಾಮನಾದರೆ
ಆಗುವೆ ನಾ ಸೀತೆ
ನೀ ರಾಮನಿಲ್ಲದಿರೆ
ನಾ ಹೇಗೆ ಸೀತೆ ? ॥

ರಾಮನ ಗುಣಗಳು
ಒಂದಿಲ್ಲದೆ
ನಾ ಆಗಬೇಕೆನ್ನುವಿ
ಸೀತೆ ಸಾವಿತ್ರಿ ॥

ನೂರೆಂಟು ಕಷ್ಟಗಳ
ಸಹಿಸಿದ ಸೀತೆಗೆ
ಸ್ಫೂರ್ತಿಯಾಗಿತ್ತು ಅದು
ರಾಮನ ಚರಿತ್ರೆ ॥

ಅಗಸನ ಕ್ಷುದ್ರ
ಅಪವಾದ ಕೇಳಿ
ಕಾಡಿಗಟ್ಟಿದ ರಾಮ
ತುಂಬು ಗರ್ಭಿಣಿಯೂ ॥

ಸೀತೆಯ ಅಪರಾಧ
ಏನಿತ್ತಿಲ್ಲದಿರೆ
ಸಹಿಸಿದಳು ಘೋರ
ದುಃಖವನ್ನೇ ॥

ಶತಮಾನದಿಂದಿಹುದು
ಸ್ತ್ರೀ ಶೋಷಣೆಯು
ಇಂದಿಗೂ ಬದಲಿಲ್ಲ
ಪುರುಷನಾಚರಣೆಯು ॥

ವಂಶ ಉದ್ಧರಿಸೆ
ಕಾಮ ತೀರಿಸೆ
ಸಂಸಾರ ನಡೆಸಿ
ಬೇಕು ಹೆಣ್ಣು ॥

ಹೊಟ್ಟೆಯಲ್ಲಿ ಹುಟ್ಟಿದ
ಭ್ರೂಣ ಹೆಣ್ಣಾದರೆ
ಕತ್ತು ಹಿಸಿಕಿ ಕೊಲ್ಲುವರು
ಮನುಜರಿವರು ॥

ರಾಮ ರಾವಣರಿರೆ
ಪುರುಷರವ ಶ್ರೇಷ್ಟರು
ಸ್ತ್ರೀ ಕನಿಷ್ಟಳು
ಅಂದಿಗಿಂದಿಗೂ ॥

ಪರರೆಂಡಿರ ಕಾಣ್ವ
ಕಾಮದ ದೃಷ್ಟಿಯಲಿ
ತನ್ನೆಂಡತಿಯ ಶೀಲ
ಶುದ್ಧ ಬೇಕುನ್ನುವಾ ॥

ಅನಾದಿ ಕಾಲದಿ ನಡೆದು
ಬಂದ ದಾರಿ ಇದು
ಸ್ತ್ರೀಗೆ ಸ್ಥಾನವದು
ಕೊನೆಯದೆಂದು ॥

---

**ಕರ್ನಾಟಕದ ಮೊಟ್ಟ ಮೊದಲ ಸ್ತ್ರೀ ನಾಟಕ ಮಂಡಳಿಯನ್ನು ರಚಿಸಿದವರು ಬಚ್ಚಾ ಸಾನಿ. ಲಕ್ಷ್ಮೇಶ್ವರದ ಲಕ್ಷ್ಮಣಲಿಂಗ ದೇವಸ್ಥಾನಕ್ಕೆ ನರ್ತನ-ಗಾಯನ ಸೇವೆಯನ್ನು ಸಲ್ಲಿಸುತ್ತಿದ್ದ ಬಚ್ಚಾ ಸಾನಿ ಪ್ರಸಿದ್ಧ ಸಂಗೀತ ವಿದುಷಿ ನಾಟಕಗಳನ್ನು ಪುರುಷ ಪಾತ್ರಗಳನ್ನು ಆಕೆ ನಿರ್ವಹಿಸುತ್ತಿದ್ದ ರೀತಿಗೆ ಯಾರೂ ಆಕೆಯನ್ನು ಹೆಂಗಸೆಂದು ಗುರುತಿಸಲು ಸಾಧ್ಯವಿರಲಿಲ್ಲ. 20ನೇ ಶತಮಾನದ ಪ್ರಾರಂಭದ ದಶಕದಲ್ಲಿ ಆಕೆ 'ರಂಗಭೂಮಿ'ಯ ರಾಣಿ' ಎಂದೆ ಖ್ಯಾತಿ.**

---

# ಸ್ತ್ರೀ ಮತ್ತು ಶೋಷಣೆ

ಗೀತಾ ಹೆಗಡೆ ವಜ್ರಳ್ಳಿ

ಅನಾದಿ ಕಾಲದಿಂದಲೂ ಮಹಿಳೆ ಎಲ್ಲಾ ಸಂದರ್ಭಗಳಲ್ಲಿಯೂ ಶೋಷಣೆಗೆ ಒಳಪಟ್ಟಿದ್ದಾಳೆ. ಬಾಲ್ಯದಿಂದ ಯೌವನಕ್ಕೆ ಹೋಗುವಾಗ ಪಡ್ಡೆ ಹುಡುಗರಿಂದ ಮದುವೆಯಾದ ಮೇಲೆ ಗಂಡನಿಂದ ಹೀಗೆ....ಸರ್ವಕಾಲದಲ್ಲಿಯೂ ಸರ್ವರಿಂದಲೂ ತುಳಿತಕ್ಕೊಳಪಟ್ಟವಳು ಮಹಿಳೆ.

**ಮಹಿಳೆಯರ ಶೋಷಣೆಗೆ ಕೆಲವು ಕಾರಣಗಳು :**

ಮುಖ್ಯವಾಗಿ ಹೇಳುವುದಾದರೆ ಪ್ರಕೃತಿ ಸ್ತ್ರೀಗೆ ಪುರುಷನಷ್ಟು ಸಮಾನವಾದ ದೈಹಿಕ ಶಕ್ತಿಯನ್ನು ನೀಡಿಲ್ಲ. ಅದರೊಂದಿಗೆ ಅನೇಕ ಮಹಿಳೆಯರು ತಮಗಿದ್ದ ಶಕ್ತಿಯನ್ನು ಮತ್ತು ಯುಕ್ತಿಯನ್ನು ಬಳಸಿಕೊಳ್ಳುತ್ತಿಲ್ಲ.

ಸ್ವಭಾವತಃ ಸ್ತ್ರೀ ನಾಚಿಕೆ ಸ್ವಭಾವದವಳು. ಯಾವುದೇ ಶೋಷಣೆಯ ವಿರುದ್ಧ ಕೂಗಲು ಅವಳಿಗೆ ನಾಚಿಕೆ ಅಡ್ಡಿ ಬರುತ್ತದೆ.

ಅನೇಕ ವೇಳೆಗಳಲ್ಲಿ ಸ್ತ್ರೀಗೆ ಸ್ತ್ರೀಯೇ ಶತ್ರು. ಒಬ್ಬ ಧೈರ್ಯದ ಹೆಣ್ಣು ಶೋಷಣೆಯ ವಿರುದ್ಧ ಸಿಡಿದೆದ್ದು ನಿಂತರೆ, ಅವಳನ್ನು ಬೆಂಬಲಿಸುವುದನ್ನು ಬಿಟ್ಟು ಅವಳಿಗೆ "ಗಂಡುಬೀರಿ" ಎಂಬ ಬಿರುದು ಕೊಡುವ ಮಹಿಳೆಯರು ನಮ್ಮಲ್ಲಿ ಸಾಕಷ್ಟಿದ್ದಾರೆ.

ಅನೇಕ ಮಹಿಳಾ ಮಂಡಳಿಗಳಲ್ಲಿ ಸ್ತ್ರೀಯರು ಮಾತನಾಡುವ ಮುಖ್ಯ ವಿಷಯವೆಂದರೆ 'ಅಡುಗೆ ವೈವಿಧ್ಯ' ಅದರ ಬಿಟ್ಟು ಆಚೀಚೆ ತಿರುಗದ ಅನೇಕ ಮಹಿಳೆಯರನ್ನು ನಾನು ನೋಡಿದ್ದೇನೆ.

ಇನ್ನೂ ಕೆಲವು ಮಹಿಳೆಯರು ಆರಂಭಶೂರರು. ಮೊದ ಮೊದಲು ಶೋಷಣೆಯ ವಿರುದ್ಧದ ಕೂಗು ಬರುಬರುತ್ತಾ ತಣ್ಣಗಾಗುತ್ತದೆ.

ಇನ್ನು ಎಲ್ಲರಿಗೂ ಗೊತ್ತಿದ್ದಂತೆ ಪುರುಷನ 'ಮಹಿಳೆ ತನಗಿಂತ ಕೆಳಗೆ' ಎಂಬ ಧೋರಣೆಯೊಂದಿಗೆ ಸ್ತ್ರೀ ಶೋಷಣೆಯಾಗುತ್ತಿದೆ.

ಈಗ ಕಾಲ ಬದಲಾಗಿದೆ. ಹಿಂದಿನ ದಿನಗಳನ್ನು ಹೋಲಿಸಿದರೆ ಈಗ ಸ್ತ್ರೀ ಶೋಷಣೆ ಸ್ವಲ್ಪ ಕಡಿಮೆಯಾಗಿದೆ. ಇಂದು ಎಲ್ಲಾ ಕ್ಷೇತ್ರದಲ್ಲೂ ಸ್ತ್ರೀ ಮಿಂಚುತ್ತಿದ್ದಾಳೆ. ಒಬ್ಬ ಮಹಿಳೆ ಯಶಸ್ವಿಯಾಗಿ ನಮ್ಮ ದೇಶವನ್ನು ಆಳಿದರೆ, ಇನ್ನೊಬ್ಬಳು ಸ್ತ್ರೀ ವಿಜ್ಞಾನ (ಮೇರಿ ಕ್ಯೂರಿ) ವಿಜ್ಞಾನದಲ್ಲಿ ಮಹತ್ಸಾಧನೆಯನ್ನು ಮಾಡಿ ಎರಡು ಸಲ ಪ್ರತಿಷ್ಠಿತ ನೋಬೆಲ್ ಪಾರಿತೋಷಕ ಪಡೆದಿದ್ದಾಳೆ. ಅವಳ ಸಾಧನೆಯನ್ನು ಇಂದಿನ ತನಕ ಯಾವ ಪುರುಷನೂ ಸರಿಗಟ್ಟಿಲ್ಲ. ಅಂಥ ಆದರ್ಶ ಸ್ತ್ರೀಯರೇ ಇಂದು ನಮಗೆ ದಾರಿದೀಪ.

ಆದರೂ ಹಳ್ಳಿಗಳಲ್ಲಿ ಮುಗ್ಧ ಸ್ತ್ರೀಯರ ಮೇಲೆ ಶೋಷಣೆ ನಿರಂತರವಾಗಿ ಸಾಗುತ್ತಿದೆ. 'ಕುಡಿದು ಬಂದು ಪತ್ನಿಯ ಕೊಲೆ', ವರದಕ್ಷಿಣೆ ಕೊಡದಿದ್ದಕ್ಕೆ ಸೊಸೆಯ ಕೊಲೆ'.... ಹೀಗೆ ಅನೇಕಾನೇಕ ವಿಷಯಗಳನ್ನು ನಾವು ದಿನ ನಿತ್ಯವೂ ನೋಡುತ್ತಿದ್ದೇವೆ. ಅವರೇ ಹಳ್ಳಿಗಳಲ್ಲಿ ನಡೆಯುತ್ತಿರುವ ಈ ದೌರ್ಜನ್ಯದ ವಿರುದ್ಧ ಮುಂದಾಗುವವರು ಅಲ್ಲಿ ಯಾರೂ ಇಲ್ಲ.

ಹೆಣ್ಣು ತಾಳ್ಮೆ ಮತ್ತು ಕರುಣೆಯ ಮೂರ್ತಿ. 'ಹೆಣ್ಣು ಎಲ್ಲಿಯವರೆಗೆ ಯಾವ ದೇಶದಲ್ಲಿ ಪೂಜಿಸಲ್ಪಡುತ್ತಾಳೋ, ಅಲ್ಲಿಯವರೆಗೆ ಆ ದೇಶ ಸುಭಿಕ್ಷವಾಗಿರುತ್ತದೆ ಎಂಬುದು ಸತ್ಯದ ಮಾತು. ಆದರೆ ಇಂದಿನ ದಿನ ಮಾನಗಳಲ್ಲಿ ಹೆಣ್ಣು ನಿಜವಾಗಿಯೂ ಪೂಜಿಸಲ್ಪಡುತ್ತಿಲ್ಲ. ಒಬ್ಬ ಹೆಣ್ಣು ಬುದ್ಧಿವಂತಳಾದರೆ ಅವಳು ಮನೆಯನ್ನೇ ಸ್ವರ್ಗವನ್ನಾಗಿ ಮಾಡಬಲ್ಲಳು. ಆದ್ದರಿಂದ ಈಗ ಮಹಿಳೆಯರ ಮೇಲೆ (ವಿಶೇಷವಾಗಿ ಹಳ್ಳಿ ಸ್ತ್ರೀಯರು) ಆಗುತ್ತಿರುವ ಶೋಷಣೆಯ ವಿರುದ್ಧ ಎಲ್ಲ ಸ್ತ್ರೀ ಪುರುಷರೂ ಹೋರಾಡಿದರೆ ದಾಸ್ಯದಲ್ಲಿ ನರಳುತ್ತಿರುವ ಅನೇಕರ ಬಾಳು ಬಂಗಾರವಾದೀತು.

## ಓದುಗರ ಗಮನಕ್ಕೆ

- 'ಮಾನಸ' ಸಂಪರ್ಕ ವಿಳಾಸದಲ್ಲಿ ಸಂಪೂರ್ಣ ನೆಲೆಯೂರಲು ಇನ್ನೂ ಸ್ವಲ್ಪ ಸಮಯ ಬೇಕಾಗಿರುವುದರಿಂದ, ಅಂತಿಮವಾಗಿ ತಿಳಿಸುವವರೆಗೂ ದಯವಿಟ್ಟು ಎಂ. ಒ. ಚೆಕ್ಕುಗಳನ್ನು ಮತ್ತು ಡ್ರಾಫ್ಟ್‌ಗಳನ್ನು **ಕಾಡುಗೋಡಿಯ** ವಿಳಾಸಕ್ಕೆ ಕಳಿಸಬೇಕೆಂದು ಕೇಳಿಕೊಳ್ಳುತ್ತೇವೆ.

- 'ಮಾನಸ'ವನ್ನು ಸಂಪರ್ಕಿಸಬಯಸುವವರಿಗಾಗಿ ಇನ್ನು ಮುಂದೆ ತಿಂಗಳ ಪ್ರತಿ ಎರಡನೇ ಶನಿವಾರ ಮತ್ತು ಕೊನೆಯ ದಿನದಂದು 'ಸಂಪರ್ಕ ವಿಳಾಸ'ವೆಂದು ಸೂಚಿಸಿರುವ ಕಛೇರಿಯು ಮಧ್ಯಾಹ್ನ 2 ಗಂಟೆಯಿಂದ ಸಂಜೆ 5 ಗಂಟೆಯವರೆಗೂ ತೆರೆದಿರುತ್ತದೆ. 'ಮಾನಸ' ಬಳಗದ ಯಾರಾದರೂ ಅಲ್ಲಿ ಕಾಣಸಿಗುತ್ತೇವೆ. ಈ ದಿನ-ಸಮಯಗಳಲ್ಲಿ ನಿಮಗೆ ಸ್ವಾಗತವಿದೆ.

**–ಸಂಪಾದಕೀಯ ಮಂಡಳಿ**

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :
" ಮಾ ನ ಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067